RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಮೇ ೨೩, ೨೦೧೩ (ಜ್ಯೇಷ್ಠ ೨, ಶಕ ವರ್ಷ ೧೯೩೫)<br>**Bangalore, Thursday, May 23, 2013 (Jyeishta 2, Shaka Varsha 1935)** | ಸಂಚಿಕೆ ೨೧<br>**Issue 21** |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ರಾಮಚಂದ್ರಪುರ ಗ್ರಾಮದ ಸ.ನಂ. 30ರಲ್ಲಿ 5–00 ಎಕರೆ ಜಮೀನನ್ನು ಕೇಂದ್ರ ಮತ್ತು ರಾಜ್ಯ ಪುರಸ್ಕೃತ ಪ್ರಮುಖ ಯೋಜನೆಗಳ ಕ್ಷೇತ್ರ ಇಲಾಖೆಗಳ ಸ್ಥಾಪನೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಗ್ರಾಅಪ/ಕಾ/136/2012, ದಿನಾಂಕ: 28–12–2012.
2. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್.ಎನ್.ಡಿ (ಎನ್.ಎ.)/ಸಿಆರ್/216/2012–13, ದಿನಾಂಕ: 31–01–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವತಿಯಿಂದ ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಪಂಚಾಯತ್ ಸಂಪನ್ಮೂಲ ಕೇಂದ್ರ ಹಾಗೂ ಪಂಚಾಯತ್ ರಾಜ್ಯ ಇಂಜಿನಿಯರಿಂಗ್ ಇಲಾಖೆಯ ಕುಡಿಯುವ ನೀರಿನ ಶೋಧನಾ ಕೇಂದ್ರ ಸ್ಥಾಪನೆಗೆ ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯ ರಾಮಚಂದ್ರಪುರದ (ಜಾಲಹಳ್ಳಿ ಸಮೀಪ) ಸ.ನಂ. 30 ರಲ್ಲಿ 12–07 ಎಕರೆ ಸರ್ಕಾರಿ ಭೂಮಿಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಬೆಂಗಳೂರು ನಗರ ಜಿಲ್ಲೆ, ರಾಮಚಂದ್ರಪುರ ಗ್ರಾಮದ ಸ.ನಂ. 30 ರಲ್ಲಿನ ಜಮೀನು ಮೂಲತಃ ಗೋಮಾಳ ಜಮೀನಾಗಿದ್ದು, ಈ ಪೈಕಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕಛೇರಿ ಮತ್ತು ವಸತಿ ಗೃಹಕ್ಕಾಗಿ 6–00 ಎಕರೆ ಜಮೀನು ಹಾಗೂ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಇವರ ಕಛೇರಿ ಹಾಗೂ ಮಿನಿ ವಿಧಾನಸೌಧಕ್ಕೆ 6–07 ಎ/ಗು ಜಮೀನನ್ನು ಜಿಲ್ಲಾಧಿಕಾರಿಗಳ ಕಛೇರಿಯ ಆದೇಶ ಸಂಖ್ಯೆ : ಎಲ್.ಎನ್.ಡಿ.(ಎನ್.ಎ.)ಸಿ.ಆರ್–95/99–2000, ದಿನಾಂಕ : 27–10–2003 ರಂತೆ ಮಂಜೂರು ಮಾಡಿದ್ದು, ಕಂದಾಯ ದಾಖಲೆಗಳಲ್ಲಿ ನಮೂದಾಗಿರುತ್ತದೆಂದು ವರದಿ ಮಾಡಿರುತ್ತಾರೆ. ಈ ಜಮೀನು ಭಾರತೀಯ ವಾಯುಸೇನೆಯ ವ್ಯಾಪ್ತಿಗೆ ಒಳಪಟ್ಟಿರುವ ಮಂಜೂರಿ ಜಮೀನಿನ ಮಧ್ಯಭಾಗದಲ್ಲಿದ್ದು, ಐ.ಎ.ಎಫ್.ರವರು ತಮಗೆ ಮಂಜೂರಾಗಿರುವ ಜಮಿನನ್ನು ಸೇರಿ ಸುತ್ತಲೂ ಕಾಂಪೌಂಡ್ ನಿರ್ಮಿಸಿಕೊಂಡಿರುತ್ತಾರೆ. ಮಂಜೂರಿ ಕೋರಿರುವ ಜಮೀನು ಪೂರ್ಣ ಖುಲ್ಲಾ ಇದ್ದು ಈ ಜಮೀನಿನಲ್ಲಿ ಯಾವುದೇ ಕಟ್ಟಡಗಳು ಇರುವುದಿಲ್ಲ. ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಗ್ರಾಮದ ಸ.ನಂ. 132/1 ರಲ್ಲಿ 0–22 ಗುಂಟೆ ಮತ್ತು ಸ.ನಂ. 132/3ರಲ್ಲಿ 0–28 ಗುಂಟೆ ಒಟ್ಟು 1–10 ಎ/ಗುಂ ಜಮೀನನ್ನು ಮಿನಿ ವಿಧಾನಸೌಧಕ್ಕೆ ಜಿಲ್ಲಾಧಿಕಾರಿಗಳ ಆದೇಶ ಸಂಖ್ಯೆ/ಎಲ್.ಎನ್.ಡಿ.(ಎನ್.ಎ.)/ಸಿ.ಆರ್. 18/2012–13, ದಿನಾಂಕ : 06–06–2012ರಂತೆ ಕಾಯ್ದಿರಿಸಲಾಗಿರುತ್ತದೆಂದು. ಆದಕಾರಣ ಮಿನಿ ವಿಧಾನಸೌಧಕ್ಕೆ ಬೇರೆ ಕಡೆ ಜಮೀನು ಮಂಜೂರು ಮಾಡಿರುವುದರಿಂದ ರಾಮಚಂದ್ರಪುರ ಗ್ರಾಮದ ಸ.ನಂ. 30ರಲ್ಲಿ ಖುಲ್ಲಾ ಇರುವ 6–07 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ರಾಮಚಂದ್ರಪುರ ಗ್ರಾಮದ ಸ.ನಂ. 30ರಲ್ಲಿ 6–07 ಎಕರೆ/ಗುಂಟೆ ಜಮೀನು ಖುಲ್ಲಾ ಇದ್ದು, ಈ ಜಮೀನಿನ ಪೈಕಿ 5–00 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮಂಜೂರು ಮಾಡುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 31 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ: 04ನೇ ಮಾರ್ಚ್, 2013.**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ರಾಮಚಂದ್ರಪುರ ಗ್ರಾಮ ಸ.ನಂ. 30ರಲ್ಲಿ 5–00 ಎಕರೆ ಸರ್ಕಾರಿ ಜಮೀನನ್ನು ಕೇಂದ್ರ ಮತ್ತು ರಾಜ್ಯ ಪುರಸ್ಕೃತ ಪ್ರಮುಖ ಯೋಜನೆಗಳ ಪರಿಣಾಮಕಾರಿ ಅನುಷ್ಠಾನದ ಹಿನ್ನೆಲೆಯಲ್ಲಿ ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಪಂಚಾಯತ್ ಸಂಪನ್ಮೂಲ ಕೇಂದ್ರ ಹಾಗೂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಕುಡಿಯುವ ನೀರಿನ ಶೋಧನಾ ಕೇಂದ್ರ ಸ್ಥಾಪನೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಉಚಿತವಾಗಿ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–I)

P.R. 517
SC - 100

## ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ಪಡೆದ ಸಾಲದ ಮೊತ್ತಕ್ಕೆ ವಿಧಿಸುವ ಬಡ್ಡಿಯನ್ನು ಹಿಂಭರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ವಾಕೈ 03 ರೇಉನಿ 2011 (ಭಾಗ–1), ದಿನಾಂಕ: 31–03–2011.
2. ಸರ್ಕಾರದ ಪತ್ರ ಸಂಖ್ಯೆ : ವಾಕೈ 3 ರೇಉನಿ 2011 (ಭಾಗ–2), ದಿನಾಂಕ: 27–07–2011.
3. ಸರ್ಕಾರಿ ಆದೇಶ ಸಂಖ್ಯೆ : ವಾಕೈ 3 ರೇಉನಿ 2011 (ಭಾಗ–1), ದಿನಾಂಕ: 25–04–2012.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ : ಕರೇಮಾಮ/ಹಣಕಾಸು/2012–13/652, ದಿನಾಂಕ: 06–11–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ಗೂಡಿನ ಬೆಲೆ ಕುಸಿತವನ್ನು ತಡೆದು ರೇಷ್ಮೆ ನೂಲಿನ ಬೆಲೆಯಲ್ಲಿ ಸ್ಥಿರತೆಯನ್ನು ಉಂಟು ಮಾಡಲು ಸಮರ್ಪಕವಾಗಿ ಕಾರ್ಯನಿರ್ವಹಿಸುವುದಕ್ಕಾಗಿ ಅದಕ್ಕೆ ಅಗತ್ಯವಿರುವ ದುಡಿಯುವ ಬಂಡವಾಳಕ್ಕಾಗಿ ಅದು ಕೆನರಾ ಬ್ಯಾಂಕ್‌ನಿಂದ ರೂ. 25–00 ಕೋಟಿಗಳ ಸಾಲ ಪಡೆಯುವುದಕ್ಕೆ ಸರ್ಕಾರದ ಗ್ಯಾರಂಟಿಯನ್ನು ಕೆಲವು ಷರತ್ತಿಗೊಳಪಟ್ಟು ನೀಡಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಬಡ್ಡಿ ಮೊತ್ತವನ್ನು ಹಿಂಭರಿಸಬೇಕೆಂದು ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರಿಗೆ ನಿರ್ದೇಶನ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಆದೇಶದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ರೂ. 25–00 ಕೋಟಿಗಳ ಸಾಲ ಪಡೆಯುವ ಗ್ಯಾರಂಟಿ ಅವಧಿಯನ್ನು ದಿನಾಂಕ : 31–03–2011ರ ಆದೇಶದಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ದಿನಾಂಕ : 31–03–2013 ರವರೆಗೆ ವಿಸ್ತರಿಸಲು ಹಾಗೂ ಸರ್ಕಾರದ ಗ್ಯಾರಂಟಿ ಮೇಲೆ ಕೆನರಾ ಬ್ಯಾಂಕಿನಿಂದ ರೂ. 25–00 ಕೋಟಿ ಸಾಲದ ಮಂಜೂರಾತಿಗೆ ಅಗತ್ಯವಾಗಿರುವ ದಸ್ತಾವೇಜುಗಳನ್ನು ನೀಡಬೇಕಾಗಿರುವುದರಿಂದ ಡೀಡ್ ಆಫ್ ಗ್ಯಾರಂಟಿಗೆ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕನಿಂದ ದಿನಾಂಕ : 01–04–2012 ರಿಂದ 30–09–2012ರ ಅವಧಿಯಲ್ಲಿ ಪಡೆದ ಸಾಲದ ಮೊತ್ತಕ್ಕೆ ವಿಧಿಸಿರುವ ಬಡ್ಡಿ ಹಾಗೂ ಪ್ರೊಸಸಿಂಗ್ ವೆಚ್ಚ ರೂ. 42,94,266/– ಗಳನ್ನು ಮಂಡಳಿಗೆ ಮರುಪಾವತಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ತೋಇ 76 ರೇಉನಿ 2012 ಬೆಂಗಳೂರು, ದಿನಾಂಕ: 18–04–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ಸಾಲ ಪಡೆದ ಮೊತ್ತಕ್ಕೆ ದಿನಾಂಕ : 01–04–2012 ರಿಂದ 30–09–2012ರ ಅವಧಿಗೆ ವಿಧಿಸಿರುವ ಬಡ್ಡಿ ವೆಚ್ಚ 42,94,266/– ಲಕ್ಷ (ನಲವತ್ತೆರಡು ಲಕ್ಷ ತೊಂಬತ್ತ ನಾಲ್ಕು ಸಾವಿರ ಇನ್ನೂರು ಅರವತ್ತಾರು ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2851–00–107–1–40 ರೇಷ್ಮೆ ಕೃಷಿ ಅಭಿವೃದ್ಧಿಗೆ ನೂತನ ಕರ್ತೃತ್ವ ಶಕ್ತಿ (ಯೋಜನೆ) ರಡಿಯಲ್ಲಿ 2013–14ನೇ ಸಾಲಿಗೆ ಒದಗಿಸಿರುವ ರೂ. 3110–47 ಲಕ್ಷಗಳ ಅನುದಾನದಿಂದ ಭರಿಸತಕ್ಕದ್ದು.

ಖಜಾನೆಯಲ್ಲಿ ಪೇಯೀಸ್ ರಸೀದಿ (payees receipt)ನ ಮುಖಾಂತರ ರೇಷ್ಮೆ ಕೃಷಿ ಮತ್ತು ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಮೊತ್ತವನ್ನು ಸೆಳೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/527/ವೆಚ್ಚ–4/2011, ದಿನಾಂಕ : 30–03–2013ರಲ್ಲಿಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.
**ಬಿ. ಎಸ್. ಚಂದ್ರಶೇಖರ್,**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ)

P.R. 530

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2013–14ರ ಹಣಕಾಸು ವರ್ಷದಲ್ಲಿ ಮೊದಲ ತ್ರೈಮಾಸಿಕ ಅವಧಿಗೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಕವಿನಿ ಆಯೋಗದ ಪತ್ರ ಸಂಖ್ಯೆ ನಂ. ಎಫ್/13/ಎಒ/ಕೆಇಆರ್‌ಸಿ/035, ದಿನಾಂಕ: 04–04–2013.

**ಪ್ರಸ್ತಾವನೆ:**

1. 2013–14ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ. 300–00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2013–14ನೇ ಸಾಲಿಗೆ ಮೊದಲ ತ್ರೈಮಾಸಿಕ ಅವಧಿಗೆ ಸಹಾಯನುದಾನ ರೂ. 75–00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್. 19 ಪಿಎಸ್‌ಆರ್ 2013 ಬೆಂಗಳೂರು, ದಿನಾಂಕ: 29–04–2013**

ಸರ್ಕಾರವು, 2013–14ನೇ ಹಣಕಾಸು ವರ್ಷದ ಮೊದಲ ತ್ರೈಮಾಸಿಕ ಅವಧಿಗೆ ಲೆಕ್ಕ ಶೀಷಿಕೆ **"**2801–80–101–1–07–101 ಸಹಾಯಾನುದಾನ (ಯೋಜನೇತರ)**"** ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 75–00 ಲಕ್ಷ (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013 ದಿನಾಂಕ : 20–04–2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 534**

## ಇಂಧನ ಸಚಿವಾಲಯ

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ: 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ: 04–09–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013, ದಿನಾಂಕ: 05–04–2013.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ **"**ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013–14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀಷಿಕೆ **"**2801–80–101–1–04–106 ಸಹಾಯಧನ (ಯೋಜನೇತರ)**"**ದ ಅಡಿಯಲ್ಲಿ ರೂ. 5250–00 ಕೋಟಿಗಳನ್ನು ಒದಗಿಸಲಾಗಿದೆ.
4. ಸರ್ಕಾರವು 2013–14ನೇ ಸಾಲಿನ ಏಪ್ರಿಲ್ 2013ಕ್ಕೆ ರೂ. 200–00 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2013 ಬೆಂಗಳೂರು, ದಿನಾಂಕ: 26-04-2013**

1. ಸರ್ಕಾರವು, ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ. 200-00 ಕೋಟಿಗಳ (ರೂ. ಇನ್ನೂರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ ("2801-80-101-1-04-106) (ಸಹಾಯಧನ) (ಯೋಜನೇತರ) ಬಾಬ್ತು ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು ಕಂಪನಿಗಳು | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ |
|---|---|
| ಬೆವಿಕಂ | 28.00 |
| ಮವಿಕಂ | 13.00 |
| ಹುವಿಕಂ | 80.00 |
| ಗುವಿಕಂ | 47.00 |
| ಚಾವಿಸನಿನಿ | 32.00 |
| ಒಟ್ಟು | 200.00 |

2. ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು 10 ಹೆಚ್‌ಪಿವರೆಗಿನ ನೀರಾವರಿ ಪಂಪುಸೆಟ್‌ಗಳ ಬಾಬ್ತು ಎಂದು ಪರಿಗಣಿಸುವುದು.
3. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 200.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು.
4. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ-ಅಸಲು ಬಾಕಿಗೆ ಲೆಕ್ಕೀಕರಿಸುವುದು.
6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
7. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
8. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ FD 538 Exp-I 2013, ಬೆಂಗಳೂರು, ದಿನಾಂಕ : 25-04-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 535**

## ಇಂಧನ ಸಚಿವಾಲಯ

**ವಿಷಯ:** 2013-14ನೇ ಸಾಲಿನಲ್ಲಿ ಇಂಧನ ಇಲಾಖೆಯ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 2013-14ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಯೋಜನಾ ಕಾರ್ಯಕ್ರಮಗಳು.

**ಪ್ರಸ್ತಾವನೆ:**

1. 2013-14ನೇ ಸಾಲಿನ ಆಯವ್ಯಯದಲ್ಲಿ ಈ ಕೆಳಕಂಡ ಯೋಜನಾ ಕಾರ್ಯಕ್ರಮಗಳಿಗೆ 2013-14ನೇ ಸಾಲಿಗೆ ಬಂಡವಾಳ/ಸಾಲ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1 | Investment in Power Utilities/ವಿದ್ಯುಚ್ಛಕ್ತಿ ವಲಯದ ಸಂಸ್ಥೆಗಳಲ್ಲಿ ಹೂಡಿಕೆ. | 700.00 |
| 2 | Investment in ESCOMs for Niranthara Jyothi (Special Development Plan)/ ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂನಲ್ಲಿ ಹೂಡಿಕೆ / (ವಿಶೇಷ ಅಭಿವೃದ್ಧಿ ಯೋಜನೆ) | 41.26 |

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 3 | Special Component Plan (SCP) /ವಿಶೇಷ ಘಟಕ ಯೋಜನೆ. | 47.19 |
| 4 | Tribal Sub Plan (TSP) / ಗಿರಿಜನ ಉಪಯೋಜನೆ | 11.55 |
| 5 | Bangalore Distribution Upgradation (JBIC) BESCOM-EAP Loans ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ) – ಬೆವಿಕಂ – ಇಎಪಿ | 145.91 |
| 6 | Belaku Yojana / ಬೆಳಕು ಯೋಜನಾ | 10.00 |
| 7 | Roof Top Solar Project / ಮೇಲ್ಛಾವಣಿ ಸೌರಶಕ್ತಿ ಯೋಜನೆ | 10.00 |
| | **ಮೊತ್ತ** | **965.91** |

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ವ್ಯಾಪ್ತಿಯಲ್ಲಿ ಕಾರ್ಯಾನುಷ್ಠಾನಗೊಳ್ಳುತ್ತಿರುವ ಬೆಂಗಳೂರು ವಿತರಣಾ ಉನ್ನತೀಕರಣ ಯೋಜನೆಗೆ JICA ಸಂಸ್ಥೆಯು ಸಾಲದ ರೂಪದಲ್ಲಿ ಬಂಡವಾಳ ಒದಗಿಸುತ್ತಿದ್ದು, ಈ ಹಣದ ಬಿಡುಗಡೆಗಾಗಿ ರಾಜ್ಯದ ಆಯವ್ಯಯದಲ್ಲಿ ರೂ. 145.91 ಕೋಟಿಗಳಷ್ಟು ಹಣ ತೆಗೆದಿರಿಸಿದೆ.

3. ಬಂಡವಾಳ ಹೂಡಿಕೆಗಾಗಿ (Investment in Power Utilities) ಆಯವ್ಯಯದಲ್ಲಿ ಒದಗಿಸಿರುವ ರೂ. 700 ಕೋಟಿಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಬಂಡವಾಳ ಕಾಮಗಾರಿಗಳಿಗೆ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ಮತ್ತು ಆಯವ್ಯಯದ ಭಾಷಣದಲ್ಲಿ ಸೂಚಿಸಿರುವ ಇತರೇ ಬಂಡವಾಳ ಕಾಮಗಾರಿಗಳಿಗೆ ಉಪಯೋಗಿಸಲಾಗುವುದು.

4. 2013–14ರಲ್ಲಿ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ ಕಾರ್ಯಾನುಷ್ಠಾನಗೊಳಿಸಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 2 ಪಿಎಸ್‌ಆರ್ 2013 ಬೆಂಗಳೂರು, ದಿನಾಂಕ: 12–04–2013**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು 2013–2014ನೇ ಸಾಲಿನಲ್ಲಿ ಈ ಕೆಳಕಂಡ ಕಾರ್ಯಾನುಷ್ಠಾನವಾಗುತ್ತಿರುವ ಯೋಜನಾ ಕಾರ್ಯಕ್ರಮಗಳನ್ನು ಮುಂದುವರಿಸಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1 | Investment in Power Utility/ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆ 4801–01–190–0–09–211 (Plan) | 700.00 |
| 2 | Investment in ESCOMs for Niranthara Jyothi (Special Development Plan)/ ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂನಲ್ಲಿ ಹೂಡಿಕೆ **(ವಿಶೇಷ ಅಭಿವೃದ್ಧಿ ಯೋಜನೆ.)** 4801–80–190–0–02–133 | 41.26 |
| 3 | Investment in ESCOMs for Special Component Plan (SCP) **ವಿಶೇಷ ಘಟಕ ಯೋಜನೆ – 4801–80–190–0–02–422** | 47.19 |
| 4 | Investment in ESCOMs for Tribal Sub Plan (TSP) ಗಿರಿಜನ ಉಪಯೋಜನೆ – 4801–80–190–0–02–423 | 11.55 |
| 5 | Investment in ESCOMs for Bangalore Distribution Upgradation (JBIC BESCOM – EAP Loans ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ) – ಬೆವಿಕಂ – ಇಎಪಿ 6801–00–205–1–80–394 | 145.91 |
| 6 | Belaku Yojana / ಬೆಳಕು ಯೊಜನಾ –2801–80–800–1–05–103 GIA-Asset Creation. | 10.00 |
| 7 | Roof Top Solar Project / ಮೇಲ್ಛಾವಣಿ ಸೌರಶಕ್ತಿ ಯೋಜನೆ 2801–80–800–1–06–102– GIA-Asset Creation. | 10.00 |
| | **ಮೊತ್ತ** | **965.91** |

2. 2013–14ನೇ ಸಾಲಿಗೆ ಆಯವ್ಯಯದಲ್ಲಿ ಬಂಡವಾಳದ ಕಾರ್ಯಕ್ರಮಗಳಿಗೆ ಒದಗಿಸಿರುವ ಹಣವನ್ನು ಸೂಕ್ತ ಪ್ರಸ್ತಾವನೆಯೊಂದಿಗೆ ಉಪಯೋಗಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗುವುದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10–07–1996ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 536**

## ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ಮತ್ತೂರು ಗ್ರಾಮದ ರೈತರು ಹಕ್ಕಿನ ಕ್ಷೇತ್ರಕ್ಕಿಂತ ಹೆಚ್ಚುವರಿಯಾಗಿ ಜಮೀನು ಹೊಂದಿರುವುದಕ್ಕೆ ಸಂಬಂಧಿಸಿದಂತೆ, ಹಣವನ್ನು ಸಂದಾಯ ಮಾಡುವುದರಿಂದ ವಿನಾಯಿತಿ ನೀಡಿ ಸ್ವಾಧೀನಾನುಭವವನ್ನು ಖಾಯಂಗೊಳಿಸುವುದರ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಕಂಇ 98 ಭೂದಾಸ 2001, ದಿನಾಂಕ : 18–9–2002.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಡವಳಿ ದಿನಾಂಕ : 12–3–2008.
3. ಮಾನ್ಯ ಕಂದಾಯ ಸಚಿವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಡವಳಿ ದಿನಾಂಕ : 2–8–2008
4. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಕಛೇರಿಯ ಪತ್ರ ಸಂಖ್ಯೆ : ಆರ್.ಆರ್.ಟಿ.ಸಿ.ಆರ್. 332/11–12 (8329), ದಿನಾಂಕ : 11–1–2012.
5. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ತಾಂ : ಮಾಜಿ.ಇನಾಂ.6/1996–97, ದಿನಾಂಕ : 24–5–2012.

**ಪ್ರಸ್ತಾವನೆ :**

ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ಮತ್ತೂರು ಗ್ರಾಮವು ಹಿಂದಿನ ಪದ್ಧತಿ ರೀತ್ಯಾ ಮಾಜಿ ಇನಾಂ ಗ್ರಾಮವಾಗಿರುತ್ತದೆ. ಇನಾಂ ರದ್ಧತಿ ಕಾಯ್ದೆ ಜಾರಿಗೆ ಬಂದ ನಂತರ ಈ ಗ್ರಾಮವನ್ನು ಸರ್ಕಾರವು ತನ್ನ ವಶಕ್ಕೆ ತೆಗೆದುಕೊಂಡು ಗ್ರಾಮದ ಜಮೀನಿನಲ್ಲಿರುವ ಅನುಭವದಾರರುಗಳ ಸ್ವಾಧೀನಾನುಭವವನ್ನು ಖಾಯಂಗೊಳಿಸಿದ ನಂತರ 1967 ರಲ್ಲಿ ಡಿಟೈಲ್ ಸರ್ವೆ ಕಾರ್ಯವನ್ನು ಕೈಗೊಳ್ಳಲಾಗಿರುತ್ತದೆ.

ಡಿಟೈಲ್‌ಸರ್ವೆ ದಾಖಲಾತಿಗಳಲ್ಲಿ ಹಾಗೂ ನಕಾಶೆಗಳಲ್ಲಿ ದೋಷವಿರುವುದಾಗಿಯೂ ಡಿಟೈಲ್‌ಸರ್ವೆ ಕಾರ್ಯವನ್ನು ಕರ್ನಾಟಕ ಭೂಕಂದಾಯ ಅಧಿನಿಯಮ ಹಾಗೂ ನಿಯಮ ಮತ್ತು ಸರ್ವೆ ಮ್ಯಾನ್ಯುಯಲ್‌ನಲ್ಲಿರುವ ಕ್ರಮವನ್ನು ಅನುಸರಿಸಿಲ್ಲದಿರುವುದಾಗ್ಯೂ ಜಮೀನಿನ ಸ್ಥಿತಿಗೂ ನಕಾಶೆಗೂ ವ್ಯತ್ಯಾಸವು ಇರುವುದಾಗಿಯೂ ಹಾಗೂ ಇನ್ನಿತರ ತಾಂತ್ರಿಕ ಕಾರಣಗಳನ್ನು ನೀಡಿ ಡೀಟೈಲ್ ಸರ್ವೆಯನ್ನು ರದ್ದುಪಡಿಸಿ ಹೊಸದಾಗಿ ಸರ್ವೆ ಸೆಟ್ಲಮೆಂಟ್ ಕಾರ್ಯವನ್ನು ಕೈಗೊಳ್ಳುವಂತೆ ಮತ್ತೂರು ಗ್ರಾಮದ ಶ್ರೀ ಸುಬ್ರಮಣ್ಯ ಅಯ್ಯರ್ ಮತ್ತು ಇತರ ಗ್ರಾಮಸ್ಥರು ಸರ್ಕಾರದ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳ ಸಂಖ್ಯೆ : 17995/2001 ಮತ್ತು 30597, 6030/2001 ರಿಟ್ ಅರ್ಜಿಗಳನ್ನು ದಾಖಲಿಸಿದ್ದರು. ಕರ್ನಾಟಕ ಉಚ್ಚನ್ಯಾಯಾಲಯವು ದಿನಾಂಕ : 2–8–2002ರ ಆದೇಶದಲ್ಲಿ ಡಿಟೈಲ್ ಸರ್ವೆ ರದ್ದುಪಡಿಸಿ ಹೊಸದಾಗಿ ಪ್ರಿಲಿಮಿನರಿ ದಾಖಲೆಗಳ ಆಧಾರದ ಮೇಲೆ ಮರುಭೂಮಾಪನ (Resurvey) ಕೆಲಸವನ್ನು ಪೂರೈಸುವಂತೆ ಆದೇಶಿಸಿರುತ್ತದೆ.

ನ್ಯಾಯಾಲಯದ ಆದೇಶದ ಮೇರೆಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ : 18–9–2002ರ ಆದೇಶದಲ್ಲಿ ಕರ್ನಾಟಕ ಭೂಕಂದಾಯ 1964ರ ಅಧಿನಿಯಮದ ಕಲಂ 106, 109, 112, 152 ಗಳನ್ವಯ ಮತ್ತೂರು ಗ್ರಾಮದಲ್ಲಿ ಚಾಲ್ತಿಯಲ್ಲಿದ್ದ ಭೂಮಾಪನ ನಿರ್ವಹಣೆ ಕಾರ್ಯವನ್ನು ಸ್ಥಗಿತಗೊಳಿಸಿ ಆರ್‌ಆರ್‌ಪಿಆರ್ (Records of Rights and Preliminary Register) ಗಳನ್ನು ಶಿವಮೊಗ್ಗ ತಹಶೀಲ್ದಾರ್‌ರವರು ತಯಾರಿಸಿ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗರವರಿಗೆ ತಕ್ಷಣ ಒದಗಿಸಲು ಸೂಚಿಸಲಾಗಿತ್ತು. ಪ್ರಿಲಿಮಿನರಿ ದಾಖಲೆಗಳ ಸ್ವೀಕೃತಿಯಾದ ನಂತರ ಮೆಟ್ರಿಕ್ ಪದ್ಧತಿಯನ್ನು ಅನುಸರಿಸಿ ಹೊಸ ನಕಾಶೆ ಮತ್ತು ದಾಖಲಾತಿಗಳನ್ನು ತಯಾರಿಸಿ ಮರುಭೂಮಾಪನ ಕಾರ್ಯ ಕೈಗೊಳ್ಳಲು ಸಂಬಂಧಿಸಿದ ಸದರಿ ಜಂಟಿ ನಿರ್ದೇಶಕರಿಗೆ ಆದೇಶಿಸಲಾಗಿತ್ತು. ಅಲ್ಲದೇ ಈ ಬಗ್ಗೆ ವ್ಯಾಜ್ಯಗಳು ಉಂಟಾದಲ್ಲಿ ಅವುಗಳನ್ನು ಬಗೆಹರಿಸಲು ಆರ್ಬಿಟರೇಷನ್ ಸಮಿತಿಯನ್ನು ರಚಿಸಿ ಭೂದಾಖಲೆಗಳ ಉಪನಿರ್ದೇಶಕರನ್ನು ಆರ್ಬಿಟರೇಟಿಂಗ್ ಅಧಿಕಾರಿಯನ್ನಾಗಿ ನೇಮಿಸಿ ಆದೇಶವನ್ನು ನೀಡಲಾಗಿರುತ್ತದೆ.

ಅದರಂತೆ, ಮರುಭೂಮಾಪನ ಕಾರ್ಯವನ್ನು ಸೆಪ್ಟೆಂಬರ್ 2003 ರಲ್ಲಿ ಪ್ರಾರಂಭಿಸಿ, ದಿನಾಂಕ : 14–10–2009 ರಂದು ಮತ್ತೂರು ಗ್ರಾಮದ ಮರು ಭೂಮಾಪನ ಕಾರ್ಯವು ಸಂಪೂರ್ಣವಾಗಿ ಪೂರ್ಣಗೊಂಡಿರುವುದಾಗಿ ಕರ್ನಾಟಕ ಭೂಕಂದಾಯ ನಿಯಮಾವಳಿಗಳು 1966ರ ನಿಯಮ 61 ಹಾಗೂ ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 127(3) ರಡಿ ನಮೂನೆ 17ರಲ್ಲಿ ಅಧಿಸೂಚನೆಯನ್ನು ದಿನಾಂಕ : 14–10–2009 ರಂದು ಹೊರಡಿಸಲಾಗಿರುತ್ತದೆಂದು ಶಿವಮೊಗ್ಗ ಜಿಲ್ಲಾಧಿಕಾರಿಯವರು ತಿಳಿಸಿರುತ್ತಾರೆ. ಈ ವರದಿಯನ್ನು ಆಧರಿಸಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಆಯುಕ್ತರು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಶಿವಮೊಗ್ಗ ಜಿಲ್ಲಾಧಿಕಾರಿಯವರ ದಿನಾಂಕ : 14–10–2009ರ ಅಧಿಸೂಚನೆಯನ್ನು ಶ್ರೀ ಸುಬ್ರಮಣ್ಯ ಅಯ್ಯರ್‌ರವರು ಘನ ಉಚ್ಚನ್ಯಾಯಾಲದಲ್ಲಿ ರಿಟ್ ಅರ್ಜಿಗಳ ಸಂಖ್ಯೆ : 32327–32329/2009 (ಕೆಎಲ್‌ಆರ್–ಎಆರ್‌ಇಎಸ್)ರಡಿ ಅರ್ಜಿಗಳನ್ನು ದಾಖಲು ಮಾಡಿ, ದಿನಾಂಕ : 10–11–2009ರಂದು ತಡೆಯಾಜ್ಞೆ ಪಡೆದಿದ್ದರು. ಸದರಿ ತಡೆಯಾಜ್ಞೆಯು ದಿನಾಂಕ : 9–6–2011 ರಂದು ಉಚ್ಚನ್ಯಾಯಾಲಯದಲ್ಲಿ ತೆರವುಗೊಂಡು ರಿಟ್ ಅರ್ಜಿಗಳು ವಜಾಗೊಂಡಿರುತ್ತದೆ. ಕರ್ನಾಟಕ ಉಚ್ಚನ್ಯಾಯಾಲಯದ ದಿನಾಂಕ : 9–6–2011ರ ಆದೇಶವನ್ನು ಪ್ರಶ್ನಿಸಿ ಶ್ರೀ ಸುಬ್ರಮಣ್ಯ ಅಯ್ಯರ್ ರವರು ರಿಟ್ ಅಪೀಲ್‌ಗಳ ಸಂಖ್ಯೆ : 5356–5358/2011ರ ಅಡಿ ಮೇಲ್ಮನವಿಗಳನ್ನು ದಾಖಲಿಸಿದ್ದು, ಸದರಿ ಮೇಲ್ಮನವಿಗಳನ್ನು ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ : 5–6–2012 ರಂದು ವಜಾಗೊಳಿಸಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 12–3–2008ರ ನಡವಳಿಯಲ್ಲಿನ ತೀರ್ಮಾನದಂತೆ ಹೆಚ್ಚುವರಿ ಭೂಮಿಯನ್ನು ಹೊಂದಿದ ಹಿಡುವಳಿದಾರರಿಗೆ ಮಾರುಕಟ್ಟೆ ದರವನ್ನು ಪಾವತಿಸಬೇಕೆಂದು ನೋಟೀಸ್ ನೀಡಲಾಗಿತ್ತು ಹೆಚ್ಚುವರಿ ಭೂಮಿಯನ್ನು ಹೊಂದಿದ ಹಿಡುವಳಿದಾರರಿಗೆ ಮಾರುಕಟ್ಟೆ ದರವನ್ನು ಪಾವತಿ ಮಾಡಬೇಕೆಂಬ ಷರತ್ತನ್ನು ಕೈಬಿಡಬೇಕೆಂದು ಸಂಬಂಧಿಸಿದ ಗ್ರಾಮಸ್ಥರ ಬೇಡಿಕೆಯನ್ನು ಪರಿಶೀಲಿಸಿದ ಅಂದಿನ ಕಂದಾಯ ಸಚಿವರು, ದಿನಾಂಕ : 2–8–2008ರಂದು ಸಭೆಯನ್ನು ನಡೆಸಿ ಹೆಚ್ಚುವರಿ ವಿಸ್ತೀರ್ಣಕ್ಕೆ ಮಾರುಕಟ್ಟೆ ದರವನ್ನು ಹಿಡುವಳಿದಾರರಿಂದ ಸಂಗ್ರಹಿಸಬೇಕೆಂದು ಹಿಂದಿನ ಪ್ರಧಾನ ಕಾರ್ಯದರ್ಶಿಗಳ ತೀರ್ಮಾನವಾಗಿದ್ದು, ಸದರಿ ತೀರ್ಮಾನವನ್ನು ಮರು ಪರಿಶೀಲಿಸಿ, ಹೆಚ್ಚುವರಿ ವಿಸ್ತೀರ್ಣದ ಜಮೀನಿನ ಹಿಡುವಳಿದಾರರಿಗೆ ಹಕ್ಕನ್ನು ನೀಡುವ ವಿಷಯದ ಬಗ್ಗೆ ಅಗತ್ಯ ಪ್ರಸ್ತಾವನೆಯನ್ನು ನಿಯಮಾನುಸಾರ ಸಿದ್ಧಪಡಿಸಿ ಸಚಿವಸಂಪುಟದ ಅನುಮೋದನೆಗೆ ಸಲ್ಲಿಸಬಹುದೆಂದು ತೀರ್ಮಾನಿಸಿದ್ದರು.

ಮೇಲೆ (4)ರಲ್ಲಿ ಓದಲಾದ ದಿನಾಂಕ : 11–1–2012ರ ಶಿವಮೊಗ್ಗ ಜಿಲ್ಲಾಧಿಕಾರಿಗಳ ಪತ್ರದಲ್ಲಿ 302 ಬ್ಲಾಕುಗಳಲ್ಲಿ 1 ರಿಂದ 20 ಗುಂಟೆವರೆಗೆ ರೈತರು ಹೆಚ್ಚುವರಿ ವಿಸ್ತೀರ್ಣದಲ್ಲಿ ಸ್ವಾಧೀನಾನುಭವದಲ್ಲಿ ಇರುವುದಾಗಿ ದೃಢಪಟ್ಟಿದೆ ಎಂದು ವರದಿ ಮಾಡಿರುತ್ತಾರೆ.

**ಎಕರೆ–ಗುಂಟೆ**

| | | |
|---|---|---|
| 1 | ಮತ್ತೂರು ಗ್ರಾಮದ ವಿಸ್ತೀರ್ಣ | 1551–03.70 |
| 2 | ಮತ್ತೂರು ಗ್ರಾಮದ ರೀಸರ್ವೆ ಸಂಬಂಧ ಅಳತೆ ಕಾಲದಲ್ಲಿ ಹಿಡುವಳಿದಾರರ ಜಮೀನಿನ ಕುರಿತು ಗುರುತಿಸಲ್ಪಟ್ಟ ಬ್ಲಾಕ್‌ಗಳು | 1344 |
| | 1. ಹಕ್ಕಿಗೆ ಸಮನಾದ ಸ್ವಾಧೀನಾನುಭವದ ಬ್ಲಾಕುಗಳು | 105 |
| | 2. ಹಕ್ಕಿಗಿಂತ ಕಡಿಮೆ ಸ್ವಾಧೀನಾನುಭವದ ಬ್ಲಾಕುಗಳು | 813 |
| | ಎ) 00–01 ಗುಂಟೆಗಿಂತ ಕಡಿಮೆ ಇರುವ ಬ್ಲಾಕುಗಳು | 344 |
| | ಬಿ) 00–01 ರಿಂದ 00–05 ಗುಂಟೆವರೆಗಿನ ಬ್ಲಾಕುಗಳು | 311 |
| | ಸಿ) 00–05 ರಿಂದ 00–20 ಗುಂಟೆವರೆಗಿನ ಬ್ಲಾಕುಗಳು | 116 |
| | ಡಿ) 00–20 ಗುಂಟೆಗಿಂತ ಹೆಚ್ಚಿಗೆ ಇರುವ ಬ್ಲಾಕುಗಳು | 42 |
| | 3. ಹಕ್ಕಿಗಿಂಗ ಹೆಚ್ಚು ಸ್ವಾಧೀನಾನುಭವದ ಬ್ಲಾಕುಗಳು | 426 |
| | ಎ) 00–01 ಗುಂಟೆವರೆಗೆ | 110 |
| | ಬಿ) 00–01 ರಿಂದ 00–05 ಗುಂಟೆವರೆಗಿನ ಬ್ಲಾಕುಗಳು | 150 |
| | ಸಿ) 00–05 ರಿಂದ 00–20 ಗುಂಟೆರವೆಗಿನ ಬ್ಲಾಕುಗಳು | 132 |
| | ಡಿ) 20 ಗುಂಟೆಗಿಂತ ಹೆಚ್ಚಿಗೆ ಇರುವ ಬ್ಲಾಕುಗಳು | 20 |
| | ಇ) ಸರ್ಕಾರಿ ಜಮೀನು ಕೆರೆ ಜಮೀನಿಗೆ ಹೊಂದಿಕೊಂಡಂತೆ ಹೆಚ್ಚುವರಿ ಸ್ವಾಧೀನುಭವ ಹೊಂದಿರುವ ಬ್ಲಾಕುಗಳು | 14 |

0–01 ಗುಂಟೆಯೊಳಗಿನ 110 ಬ್ಲಾಕುಗಳು ಹಾಗೂ ಅವುಗಳ ಜಮೀನಿಗೆ ಹೊಂದಿಕೊಂಡ 14, ಒಟ್ಟು 124 ಬ್ಲಾಕುಗಳನ್ನು ಹೊರತುಪಡಿಸಿ 302 ಬ್ಲಾಕುಗಳಿಗೆ ಇಂದಿನ ಮಾರುಕಟ್ಟೆ ಪ್ರಕಾರ ದರವನ್ನು ನಿಗದಿಪಡಿಸಿದ್ದಾದರೆ ರೂ. 1,32,86,463–00 (ಒಂದು ಕೋಟಿ ಮೂವತ್ತೆರಡು ಲಕ್ಷ ಎಂಬತ್ತಾರು ಸಾವಿರದ ನಾಲ್ಕುನೂರ ಅರವತ್ತಮೂರು ರೂಪಾಯಿಗಳು ಮಾತ್ರ) ಆಗುತ್ತದೆ. 0–20 ಗುಂಟೆಗೆ ಮೀರಿದ ಹೆಚ್ಚುವರಿ ಅನುಭವವನ್ನು ಪ್ರತ್ಯೇಕ ಬ್ಲಾಕುಗಳಾಗಿ ವಿಂಗಡಿಸಿ ಅವುಗಳನ್ನು ಸರ್ಕಾರಿ ಜಮೀನು ಎಂದು ಗುರುತಿಸಿ ಅವುಗಳಿಗೆ ಪ್ರತ್ಯೇಕ ಸರ್ವೆ ನಂಬರುಗಳನ್ನು ನೀಡಲಾಗಿದ್ದು ಅವುಗಳ ಸಂಖ್ಯೆ 20 ಇವೆ. 14 ಬ್ಲಾಕ್‌ಗಳ ಹೆಚ್ಚುವರಿ ಅನುಭವವಿರುವ ಸಂದರ್ಭಗಳಲ್ಲಿ ಸರ್ಕಾರಿ ಜಮೀನು ಹೊಂದಿಕೊಂಡಂತೆ ಇದ್ದಲ್ಲಿ ಇಂತಹ ಹೆಚ್ಚುವರಿ ಅನುಭವದ ಜಮೀನನ್ನು ಸರ್ಕಾರಿ ಜಮೀನಿಗೆ ಸೇರ್ಪಡೆ ಮಾಡಲಾಗಿದೆ. ಸರ್ಕಾರಿ ಜಮೀನುಗಳಿಗೆ ಪ್ರತ್ಯೇಕವಾದ ಸರ್ವೆ ನಂಬರುಗಳನ್ನು ನೀಡಿ ವಿಂಗಡಿಸಲಾಗಿರುತ್ತದೆ. ನಂಬರುಗಳಿಗೆ ಲಗತ್ತಾಗಿ ಬರುವ ಹೆಚ್ಚುವರಿ ವಿಸ್ತೀರ್ಣದ ಬ್ಲಾಕುಗಳನ್ನು ಸರ್ಕಾರಿ ನಂಬರುಗಳಿಗೆ ಸೇರಿಸಲಾಗಿರುತ್ತದೆ. ಸುತ್ತಲೂ ಸರ್ಕಾರಿ ಜಮೀನಿದ್ದು, ಮಧ್ಯೆ ಬರುವ ಖಾಸಗಿ ಸರ್ವೆ ನಂಬರುಗಳಲ್ಲಿ ಹೆಚ್ಚುವರಿ ವಿಸ್ತೀರ್ಣವುಳ್ಳ ಬ್ಲಾಕುಗಳನ್ನು ಸರ್ಕಾರಿ ಜಮೀನಿಗೆ ಸೇರಿಸಲು ಅವಕಾಶವಿಲ್ಲದ ಪ್ರಯುಕ್ತ ಖಾಸಗಿ ಜಮೀನುಗಳಿಗೆ ಹೆಚ್ಚುವರಿ ವಿಸ್ತೀರ್ಣವನ್ನು ಗುರುತಿಸಿದ್ದು ಅವುಗಳ ವಿಸ್ತೀರ್ಣವನ್ನು ಪಟ್ಟಿ ಮಾಡಲಾಗಿದೆ. ಕಡಿಮೆ ವಿಸ್ತೀರ್ಣ ಇದ್ದಲ್ಲಿ ಪರಿಹಾರ ನೀಡುತ್ತಿಲ್ಲ.

302 ಪ್ರಕರಣಗಳಲ್ಲಿ ರೈತರು ಹಕ್ಕಿನ ಕ್ಷೇತ್ರಕ್ಕಿಂತ ಹೆಚ್ಚುವರಿಯಾಗಿರುವ ಕ್ಷೇತ್ರವನ್ನು ಪ್ರತ್ಯೇಕವಾಗಿ ಸರ್ಕಾರವೆಂದು ನಮೂದಿಸದೇ ಆಯಾ ಅನುಭವದಾರರಿಗೆ ಸೇರಿಸುವುದು ಸೂಕ್ತವೆಂದು ಈ ವಿಚಾರದಲ್ಲಿ ಹೆಚ್ಚುವರಿ ಜಮೀನಿಗೆ ಹಣ ಪಾವತಿಸಲು ರಿಯಾಯಿತಿ ನೀಡಬೇಕೆಂದು ಗ್ರಾಮಸ್ಥರ ಬೇಡಿಕೆ ಸಹ ನ್ಯಾಯಯುತವಾಗಿದೆ ಎಂದು ಶಿವಮೊಗ್ಗ ಜಿಲ್ಲಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ಮೇಲೆ (5)ರಲ್ಲಿ ಓದಲಾದ ದಿನಾಂಕ : 24–5–2012ರ ಭೂಮಾಪನ ಆಯುಕ್ತರ ಪತ್ರದಲ್ಲಿ. ಹೆಚ್ಚುವರಿ ವಿಸ್ತೀರ್ಣವುಳ್ಳ ಸ್ವಾಧೀನಾನುಭವದಾರರಿಂದ ಹಣ ವಸೂಲು ಮಾಡುವುದು ಸೂಕ್ತವಲ್ಲವೆಂದು ಅಭಿಪ್ರಾಯಪಟ್ಟು ಹೆಚ್ಚುವರಿ ಜಮೀನಿಗೆ ಹಣ ಪಾವತಿ ಮಾಡಿಸಿಕೊಳ್ಳುವ ಸೂಚನೆಯನ್ನು ಪುನರ್‌ಪರಿಶೀಲಿಸಿ ಸೂಕ್ತ ಆದೇಶ ನೀಡಲು ಸರ್ಕಾರವನ್ನು ಕೋರಿರುತ್ತಾರೆ.

ಶಿವಮೊಗ ತಾಲ್ಲೂಕು ನಿಧಿಗೆ ಹೋಬಳಿ ಮತ್ತೂರು ಗ್ರಾಮಸ್ಥರು ಹೊಂದಿರುವ ಹೆಚ್ಚುವರಿ ವಿಸ್ತೀರ್ಣದ ಬಗ್ಗೆ ಒಟ್ಟು ರೂ. 1,32,86,463/– (ಒಂದು ಕೋಟಿ ಮೂವತ್ತೆರಡು ಲಕ್ಷದ ಎಂಬತ್ತಾರು ಸಾವಿರದ ನಾಲ್ಕು ನೂರ ಅರವತ್ತಮೂರು ರೂಪಾಯಿಗಳು ಮಾತ್ರ) ಗಳನ್ನು ರೈತರು ಸಂದಾಯ ಮಾಡುವುದರಿಂದ ವಿನಾಯಿತಿ ನೀಡಲು ಸರ್ಕಾರವು ತೀರ್ಮಾನಿಸಿ. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 17 ಭೂದಾಸ 2012, ಬೆಂಗಳೂರು, ದಿನಾಂಕ : 5-9-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲೆಯ ನಿಧಿಗೆ ಹೋಬಳಿ ಮತ್ತೂರು ಗ್ರಾಮದ 302 ಪ್ರಕರಣಗಳಲ್ಲಿ ಹಕ್ಕಿನ ಕ್ಷೇತ್ರಕ್ಕಿಂತ ಹೆಚ್ಚುವರಿಯಾಗಿ ಜಮೀನು ಹೊಂದಿರುವ ರೈತರು ಈಗಿನ ಮಾರುಕಟ್ಟೆ ಬೆಲೆಯ ಪ್ರಕಾರ ಅಂದಾಜು ತಗಲುವ ವೆಚ್ಚವಾದ ರೂ. 1,32,86,463-00 (ಒಂದು ಕೋಟಿ ಮೂವತ್ತೆರಡು ಲಕ್ಷದ ಎಂಬತ್ತಾರು ಸಾವಿರದ ನಾಲ್ಕು ನೂರ ಅರವತ್ತಮೂರು ರೂಪಾಯಿಗಳು ಮಾತ್ರ) ಗಳ ಮೊತ್ತವನ್ನು ಸಂದಾಯ ಮಾಡುವುದರಿಂದ ವಿನಾಯಿತಿ ನೀಡಿ, ಸ್ವಾಧೀನಾನುಭವವನ್ನು ಖಾಯಂಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 618 ವೆಚ್ಚ-7/2012 ದಿನಾಂಕ : 19-7-2012 ಮತ್ತು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ : ಲಾ 434 ಅಭಿಪ್ರಾಯ 2012, ದಿನಾಂಕ : 10-8-2012ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಂಭುಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

**P.R. 518**

**SC - 100**

## ವಸತಿ ಸಚಿವಾಲಯ

**ವಿಷಯ:** ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇದರ ಸಿಬ್ಬಂದಿ/ಅಧಿಕಾರಿಗಳ ವೈದ್ಯಕೀಯ ವೆಚ್ಚ ಮರುಪಾವತಿ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಅಂತ್ಯಗೊಂಡ ಪತ್ರ ವ್ಯವಹಾರ ಸಂಖ್ಯೆ : ಕಕೊಅಮ/ಆಡಳಿತ/30-63/2012-13, ದಿನಾಂಕ : 11-06-2012.

**ಪ್ರಸ್ತಾವನೆ:**

ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಲಿ, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳಲ್ಲಿ ದಿನಾಂಕ : 20-04-2012ರಂದು ನಡೆದ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಸಭೆಯಲ್ಲಿ ವಿಷಯ ಮಂಡಿಸಿ ಕೆಳಕಂಡ ನಿರ್ಣಯಕ್ಕೆ ಅನುಮೋದನೆ ಪಡೆಯಲಾಗಿದೆ ಎಂದು ತಿಳಿಸಿರುತ್ತಾರೆ.

"ಮಂಡಳಿಯ ಅಧಿಕಾರಿಗಳ/ನೌಕರರ ಆರೋಗ್ಯ ಹಿತದೃಷ್ಟಿ ಹಿನ್ನೆಲೆಯಲ್ಲಿ ಸದರಿಯವರ ವೈದ್ಯಕೀಯ ವೆಚ್ಚವನ್ನು ಸಕಾಲದಲ್ಲಿ ಭರಿಸುವ ಸಂಬಂಧ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ 1963 ನಿಯಮವನ್ನು ಮಂಡಳಿಗೆ ಅಳವಡಿಸಿಕೊಳ್ಳುವ ಬಗ್ಗೆ ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಗಳೊಂದಿಗೆ ಮಂಡಳಿಯ, ಸಹ ಇತರೆ ಇಲಾಖೆ/ಪ್ರಾಧಿಕಾರ/ಮಂಡಳಿಗಳಂತೆ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮಗಳಿಗನುಸಾರವಾಗಿ ಒಪ್ಪಂದವನ್ನು ಮಾಡಿಕೊಳ್ಳಲು (Memorandum of understanding to extend in-patient Medical Treatment to the Employees of KSDS) ಈ ಬಗ್ಗೆ ಸರ್ಕಾರದಿಂದ ಹೊರಡಿಸಲಾದ ಮಾರ್ಗಸೂಚಿಗಳನ್ವಯ ಕ್ರಮ ಕೈಗೊಳ್ಳಲು ಮಂಡಳಿಯ ಅನುಮೋದನೆ ಪಡೆಯಲಾಗಿದೆ."

ಅದರಂತೆ ಸದರಿ ಮಂಡಳಿಯ ನೌಕರರ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಸರ್ಕಾರದ ವಿಶೇಷ ಮಂಜೂರಾತಿಯನ್ನು ಕೋರಿರುತ್ತಾರೆ.

ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಪ್ರಸ್ತಾವನೆಯನ್ನು ಒದಗಿಸಲಾದ ದಾಖಲೆಗಳನ್ವಯ ಪರಿಶೀಲಿಸಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಿಬ್ಬಂದಿ ಮತ್ತು/ಅಧಿಕಾರಿಗಳ ವೈದ್ಯಕೀಯ ವೆಚ್ಚ ಮರುಪಾವತಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ನ್ನು ಯಥಾವತ್ತಾಗಿ (mutatis mutandis) ಅಳವಡಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 25 ಕೊಮಂಲೆ 2012, ಬೆಂಗಳೂರು, ದಿನಾಂಕ: 08ನೇ ಏಪ್ರಿಲ್, 2013.**

ಪಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಿಬ್ಬಂದಿ ಮತ್ತು ಅಧಿಕಾರಿಗಳ ವೈದ್ಯಕೀಯ ವೆಚ್ಚ ಮರುಪಾವತಿಗೆ ಸಂಬಂಧಿಸಿದಂತೆ, ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ನ್ನು ಯಥಾವತ್ತಾಗಿ (mutatis mutandis) ಅಳವಡಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 186 ಸೇನಿಎಫ್ 2012, ದಿನಾಂಕ : 28-09-2012 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 396 ವೆಚ್ಚ-9/2012, ದಿನಾಂಕ : 27-12-2012ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾಗಣ್ಣ,**

ಪೀಠಾಧಿಕಾರಿ-4,

ವಸತಿ ಇಲಾಖೆ.

**P.R. 537**

**SC - 400**

## ವಸತಿ ಸಚಿವಾಲಯ

### ತಿದ್ದೋಲೆ

**ಸಂಖ್ಯೆ : ವಇ 25 ಕೊಮಂಲೆ 2011, ಬೆಂಗಳೂರು, ದಿನಾಂಕ : 25ನೇ ಏಪ್ರಿಲ್, 2013**

**ವಿಷಯ :** ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇದರ ಸಿಬ್ಬಂದಿ/ಅಧಿಕಾರಿಗಳ ವೈದ್ಯಕೀಯ ವೆಚ್ಚ ಮರುಪಾವತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ : ವಇ 25 ಕೊಮಂಲೆ 11, ದಿನಾಂಕ : 08–04–2013.

ಸರ್ಕಾರದ ಆದೇಶ ಸಂಖ್ಯೆ : ವಇ 25 ಕೊಮಂಲೆ 2012, ದಿನಾಂಕ : 08–04–2013ರ ಎರಡನೇ ಪುಟದಲ್ಲಿ **ಸರ್ಕಾರದ ಆದೇಶ ಸಂಖ್ಯೆ : ವಇ 25 ಕೊಮಂಲೆ 2012, ದಿನಾಂಕ : 08–04–2013** ಎನ್ನುವುದರ ಬದಲಾಗಿ **ಸರ್ಕಾರದ ಆದೇಶ ಸಂಖ್ಯೆ : ವಇ 25 ಕೊಮಂಲೆ 2011, ದಿನಾಂಕ : 08–04–2013** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗಣ್ಣ,**
ಪೀಠಾಧಿಕಾರಿ–4,
ವಸತಿ ಇಲಾಖೆ.

P.R. 538
SC - 400

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವನ್ನು 'ಕರ್ನಾಟಕ ಮಹರ್ಷಿ ವಾಲ್ಮೀಕಿ ಅಭಿವೃದ್ಧಿ ನಿಗಮ' ಎಂದು ಮರುನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ : ಕಪಪಅನಿ/ಸಿಆ/ಸಿಆರ್/2012–13/4652, ದಿನಾಂಕ: 24–01–2013.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ರಾಜ್ಯ ಸರ್ಕಾರವು ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವನ್ನು 2006ರಲ್ಲಿ ಸ್ಥಾಪನೆಗೊಂಡು, ದಿನಾಂಕ : 22–02–2007 ರಿಂದ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿದೆ. ಈ ನಿಗಮವು ರಾಜ್ಯದಲ್ಲಿನ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗಾಗಿ ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಕಾರ್ಯೋನ್ಮುಖವಾಗಿದೆ. ರಾಜ್ಯದಲ್ಲಿನ ಪರಿಶಿಷ್ಟ ಪಂಗಡದವರ ಮೂಲ ಪುರುಷ ವಾಲ್ಮೀಕಿ. ಇವರ ಜಯಂತಿಯನ್ನು ಪ್ರತಿ ವರ್ಷ ದಿನಾಂಕ : 22ನೇ ನವೆಂಬರ್‌ರಂದು ಸರ್ಕಾರದ ಕಾರ್ಯಕ್ರಮವಾಗಿ ಆಚರಿಸಲಾಗುತ್ತಿದೆ. ಇತರೇ ಅಭಿವೃದ್ಧಿ ನಿಗಮಗಳಾದ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವನ್ನು 'ಡಿ ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ'ವೆಂದು ಕರ್ನಾಟಕ ಪರಿಶಿಷ್ಟ ಜಾತಿ ಅಭಿವೃದ್ಧಿ ನಿಗಮವನ್ನು 'ಡಾ॥ ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ'ವೆಂದು, ಮತ್ತು ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮವನ್ನು 'ಬಾಬು ಜಗಜೀವನರಾಮ್ ಅಭಿವೃದ್ಧಿ ನಿಗಮ'ವೆಂದು ಮರು ನಾಮಕರಣ ಮಾಡಿರುತ್ತದೆ, ಇದೇ ರೀತಿ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವನ್ನು "ಕರ್ನಾಟಕ ಮಹರ್ಷಿ ವಾಲ್ಮೀಕಿ ಅಭಿವೃದ್ಧಿ ನಿಗಮ'ವೆಂದು ಮರು ನಾಮಕರಣ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಕಇ 36 ಎಸ್‌ಡಿಸಿ 2013, ಬೆಂಗಳೂರು, ದಿನಾಂಕ: 08–03–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ "ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ"ವನ್ನು "ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ"ವೆಂದು ಮರು ನಾಮಕರಣ ಮಾಡಲು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.
**ವಿ. ರತ್ನಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಮಾಜ ಕಲ್ಯಾಣ ಇಲಾಖೆ

P.R. 539
SC - 100

## ಒಳಾಡಳಿತ ಸಚಿವಾಲಯ

**ವಿಷಯ:** ಕೇರಳ ರಾಜ್ಯದ ಶಬರಿಮಲೈ ವಿಶೇಷ ಬಂದೋಬಸ್ತ್ ಕರ್ತವ್ಯಕ್ಕೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 03 ಕಂಪನಿಗಳನ್ನು ನಿಯೋಜಿಸಿರುವ ಬಗ್ಗೆ ಸರ್ಕಾರದಿಂದ ಘಟನೋತ್ತರ ಮಂಜೂರಾತಿ ಆದೇಶ ನೀಡುವ ಕುರಿತು.

**ಓದಲಾಗಿದೆ:**
1. ಶ್ರೀ ಕೆ. ಎಸ್. ಬಾಲಸುಬ್ರಮಣಿಯನ್, ರಾಜ್ಯ ಪೊಲೀಸ್ ಮುಖ್ಯಸ್ಥರು, ತಿರುವನಂತಪುರಂ, ಕೇರಳ ಇವರ ಅ.ಸ. ಪತ್ರ ಸಂಖ್ಯೆ : ಯು2/20505/2012(10), ದಿನಾಂಕ: 10–09–2012.
2. ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರ ಪತ್ರ ಸಂ. ಎಲ್&ಒ/ಎಂ.ಐ.ಎಸ್.ಸಿ/36/2010–11, ದಿನಾಂಕ : 03–10–2012.

3. ಎಡಿಜಿಪಿ, ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಫ್ಯಾಕ್ಸ್ ಸಂದೇಶದ ಪತ್ರ ಸಂ./ಡಿಇಪಿ/215/ ಶಬರಿಮಲೈ/2012–13, ದಿನಾಂಕ : 23–11–2012 ಮತ್ತು ಡಿಪ್ಲಾಯ್/215/ ಶಬರಿಮಲೈ/2012–13, ದಿನಾಂಕ : 06–11–2012.
4. ಎಡಿಜಿಪಿ, ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಪತ್ರ ಸಂ. ಡಿಪ್ಲಾಯ್/215/ಶಬರಿಮಲೈ/2012–13, ದಿನಾಂಕ : 14–02–2013.
5. ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರ ಪತ್ರ ಸಂ. : ಕಾನೂನು(1)/23/2012–13, ದಿನಾಂಕ : 08–03–2013.

**ಪ್ರಸ್ತಾವನೆ:**

ಕೇರಳ ರಾಜ್ಯದ ಶಬರಿಮಲೈ ದೇವಸ್ಥಾನದ ವಿಶೇಷ ಬಂದೋಬಸ್ತ್ ಕರ್ತವ್ಯಕ್ಕೆ 03 ತುಕಡಿಗಳನ್ನು ಕಳುಹಿಸುವಂತೆ ಮೇಲೆ (1)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ರಾಜ್ಯ ಪೊಲೀಸ್ ಮುಖ್ಯಸ್ಥರು, ಕೇರಳ ಇವರು ಡಿಜಿ ಮತ್ತು ಐಜಿಪಿ, ಕರ್ನಾಟಕ, ಬೆಂಗಳೂರು ಇವರನ್ನು ಕೋರಿದ್ದಾರೆ. ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿಪಿ, ಕೇರಳ ಇವರ ಕೋರಿಕೆಯಂತೆ ಕರ್ನಾಟಕ ರಾಜ್ಯದ 03 ಮೀಸಲು ಪಡೆ ನಿಯೋಜಿಸಲು ಎಡಿಜಿಪಿ, ಕೆ.ಎಸ್.ಆರ್.ಪಿ.ರವರಿಗೆ ಡಿಜಿ ಮತ್ತು ಐಜಿಪಿ, ಬೆಂಗಳೂರುರವರು ಆದೇಶಿಸಿದ್ದಾರೆ. ಅದರಂತೆ ಮೇಲೆ ಓದಲಾದ (3)ರ ಫ್ಯಾಕ್ಸ್ ಸಂದೇಶದ ಮೂಲಕ ಎಡಿಜಿಪಿ. ಕೆ.ಎಸ್.ಆರ್.ಪಿ.ರವರು ದಿನಾಂಕ : 01/12/2012 ರಿಂದ 19/01/2013ರವರೆಗೆ ಕೇರಳ ರಾಜ್ಯದ ಶಬರಿಮಲೈಗೆ ನಿಯೋಜನೆ ಮೇಲೆ ಕಳುಹಿಸಿದ್ದು, ಮೇಲೆ ಓದಲಾದ (4) ಮತ್ತು (5)ರ ಪ್ರಸ್ತಾವನೆಯನ್ವಯ ತತ್ಸಂಬಂಧ ಘಟನೋತ್ತರ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 114 ಎಸ್‌ಎಸ್‌ಟಿ 2013, ಬೆಂಗಳೂರು, ದಿನಾಂಕ: 25–04–2013**

ದಿನಾಂಕ : 01–12–2012 ರಿಂದ 19–01–2013ರವರೆಗೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆಯ 03 ಕಂಪನಿಗಳನ್ನು ಕೇರಳ ರಾಜ್ಯದ ಶಬರಿಮಲೈ ದೇವಸ್ಥಾನದ ವಿಶೇಷ ಬಂದೋಬಸ್ತ್ ಕರ್ತವ್ಯಕ್ಕೆ ನಿಯೋಜಿಸಿರುವುದಕ್ಕೆ ಘಟನೋತ್ತರ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ ವೈ. ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 541
SC - 20

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶ್ರೀನಿವಾಸ, ಹೆಚ್.ಸಿ.–3302, ಕಾಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ : ಡಿಇ/ಆರ್. 6/40/ಇ/1997, ದಿನಾಂಕ : 15–11–1997.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಂಚಾರ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ ; 58/ಅಪೀಲು/97–98, ದಿನಾಂಕ : 01–06–1998.
3. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ : 11–02–2009.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)125/2008–09, ದಿನಾಂಕ : 26–02–2011 & 21–10–2011.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 176 ಸಿಎನ್‌ಎಸ್ 2012, ದಿನಾಂಕ : 01–04–2013.

**ಪ್ರಸ್ತಾವನೆ:**

ಶ್ರೀ ಶ್ರೀನಿವಾಸ, ಇವರು ಬೆಂಗಳೂರಿನ ಅಲಸೂರು ಗೇಟ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಅಶಿಸ್ತು, ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ನೀವು ದಿನಾಂಕ : 24–02–1996 ರಿಂದ ಇದುವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು ಯಾವುದೇ ಮುನ್ಸೂಚನೆ ನೀಡದೇ ಇದ್ದು ಕರ್ತವ್ಯಕ್ಕೆ ಹಾಜರಾಗುವಂತೆ ಕಳುಹಿಸಿದ ಜ್ಞಾಪನ ಪತ್ರಗಳನ್ನು ಸ್ವೀಕರಿಸಿಕೊಂಡಿದ್ದರೂ ಸಹಾ ಗೈರುಹಾಜರಿಯನ್ನು ಮುಂದುವರಿಸಿ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿದ್ದೀರಿ ಹಾಗೂ ಶಿಸ್ತಿನ ಇಲಾಖೆಯಲ್ಲಿದ್ದು ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣಾ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮುಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 15–11–1997ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಂಚಾರ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 01–06–1998ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಿಸಲಾಗಿದೆ, ಇವರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಇಳಿಸಿದೆ, ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನವನ್ನು ಪಡೆಯುವುದು. ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಲಾಗಿದೆ ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ವಿಧಿಸಿರುವ ದಂಡನೆಯು ತಾಂತ್ರಿಕ ದೋಷದಿಂದ ಕೂಡಿರುವ ಕಾರಣ ಇದನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 45 ಪೊಸಿಅ 2009, ಬೆಂಗಳೂರು, ದಿನಾಂಕ: 24–04–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶ್ರೀನಿವಾಸ, ಹೆಚ್.ಸಿ.–3302, ಕಾಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ದಂಡನೆಯ ಅವಧಿ ಸೂಚಿಸುವುದಕ್ಕೆ ಮಾತ್ರ ಸೀಮಿತಗೊಳಿಸಿ ಭಾಗಶಃವಾಗಿ ಪುರಸ್ಕರಿಸಿ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಿಸಲಾಗಿದೆ. ಇವರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಎರಡು ವರ್ಷಗಳ ಅವಧಿಗೆ ಸಂಚಿತ ಪರಿಣಾಮ ಬೀರದಂತೆ ಇಳಿಸಿದೆ, ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ವೇತನರಹಿತ ರಜೆಯೆಂದು ಪರಿಗಣಿಸಿ ಆದೇಶಿಸಿದೆ. ಈ ಮಾರ್ಪಾಡು ದಂಡನೆಯು ಮೇಲ್ಮನವಿ ಪ್ರಾಧಿಕಾರದ ದಂಡನಾದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 542
SC - 30

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಪಾವತಿಸಿರುವ ₹. 10.00 ಕೋಟಿ ಸಾಲ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ವಾಕೈ 78 ಸಸಕಾ 2010, ದಿನಾಂಕ : 20–12–2010.

**ಪ್ರಸ್ತಾವನೆ :**

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಪಾಂಡವಪುರ, ಮಂಡ್ಯ ಜಿಲ್ಲೆ, ಈ ಕಾರ್ಖಾನೆಗೆ ಹೆಚ್ಚುವರಿ ದುಡಿಯುವ ಬಂಡವಾಳವಾಗಿ 2010–11ನೇ ಸಾಲಿನ ಪೂರಕ ಅಂದಾಜು ಪಟ್ಟಿಯಲ್ಲಿ ಒದಗಿಸಿರುವ ಮೊತ್ತದಿಂದ ₹. 10.00 ಕೋಟಿಗಳನ್ನು ಬಿಡುಗಡೆ ಮಾಡಲು ಮೇಲೆ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯು ಪಾವತಿಸಲು ಬಾಕಿ ಇರುವ ₹. 10.00 ಕೋಟಿಗಳ ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧದಲ್ಲಿ ನಿಗಧಿಪಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 78 ಸಸಕಾ 2010, ಬೆಂಗಳೂರು, ದಿನಾಂಕ : 25–4–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಪಾಂಡವಪುರ, ಮಂಡ್ಯ ಜಿಲ್ಲೆ ಈ ಕಾರ್ಖಾನೆಗೆ ದುಡಿಯುವ ಬಂಡವಾಳವಾಗಿ ಬಿಡುಗಡೆ ಮಾಡಿರುವ ₹. 10.00 ಕೋಟಿಗಳ ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧಲ್ಲಿರುವಂತೆ ವಿಧಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ : 6–4–2013 ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ–41 ವೆಚ್ಚ–2/2013ರ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ).

## ANNEXURE To the G.O. No. CI 78 SaSaka 2010, dated : 25-4-2013

### Essential Details of Loans Sanctioned vide Government Orders

### No. CI 78 SaSaKa 2010, dated : 20-12-2010

### LOANS AND ADVANCES BY STATE GOVERNMENT

| | | |
|---|---|---|
| 1. Sanctioning Authority | Government of Karnataka | |
| 2. Sanction (G.O. No. and date) | No. CI 78 SaSaKa 2010, dated : 20-12-2010 | |
| 3. To whom sanctioned | The Pandavapura Sahakari Sakkare Karkhane Niyamitha, Pandavapura, Mandya District | |
| 4. Amount Sanctioned (in words and figures) | ₹. 10.00 crores (Ten crores only) | |
| 5. Sanction valid upto | Not applicable | |
| 6. Purpose of the Loan | Working capital | |
| 7. Payable in cash or adjustment | Cash/cheque | |
| 8. Plan or Non-Plan | Plan | |
| 9. Head of Account to which the loan is debitable | 6860-04-101-0-10-394 (Plan) | |
| 10. Progressive amount of loan sanctioned to date in the financial year | G.O. No. and date | Amount (Rs. in crores) |
| | 1. No. CI 87 SaSaKa 2008 (p) dated: 26-6-2010 | 5.00 |
| | 2. No. CI 78 SaSaKa 2010 dated : 9-9-2010; and | 5.00 |
| | 3. No. CI 78 SaSaKa 2010, dated: 21-10-2010 | 5.00 |
| | **Total** | **15.00** |
| 11. Period of Loan | To be repaid before 31-03-2011 | |
| 12. Moratorium towards repayment if any | Nil | |
| 13. Date and Year from which Repayment is to Commence | To be repaid before 31-3-2011 | |
| 14. Mode of repayment | By Cash/Cheque/DD | |
| 15. Rate of Interest<br>(a) Effective (if installment received on or before due date)<br>(b) Normal rate (if installment not received on or before due date)<br>(c) Penal rate of interest (on over due installment for the period of default)<br>(d) Mode of recovery of interest | <br><br>13%<br>2.5%<br>Cash or DD | |
| 16. Adjustment of overdue loans, if any | | |
| 17. Authority who countersigns the payee's receipt | Commissioner for Cane Development and Director of Sugar, Banglaore | |
| 18. Authority who maintains loan ledger and watches recovery | Commissioner for Cane Development and Director of Sugar, Bangalore | |

| | |
|---|---|
| 19. Authority responsible for reconciliation and monitoring of loan | Commissioner for Cane Development and Director of Sugar, Bangalore |
| 20. Authority to whom utilisation certificates are to be given | Commissioner for Cane Development and Director of Sugar, Bangalore |
| 21. Authority who should furnish estimate of recovery of loan and interest for inclusion in the budget estimates | Commissioner for Cane Development and Director of Sugar, Bangalore |

**B. RAMASWAMY**
Under Secretary to Government,
Commerce and Industries Department (Co-operative Sugar).

**P.R. 549**

## ಸಾರಿಗೆ ಸಚಿವಾಲಯ

**ವಿಷಯ :** ಆದೇಶ/ಅಧಿಸೂಚನೆ/ಹಿಂಬರಹಗಳಲ್ಲಿ ಸಹಿಯ ಜೊತೆಗೆ ಹೆಸರನ್ನು ಕಡ್ಡಾಯವಾಗಿ ನಮೂದಿಸುವ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಅಡ್ವೋಕೇಟ್ ಜನರಲ್–II ರವರ ಪತ್ರ ಸಂಖ್ಯೆ : 9518/AG/12–13, ದಿನಾಂಕ : 8–2–2013

**ಪ್ರಸ್ತಾವನೆ :**

ಮೇಲೆ ಓದಲಾದ ಹೆಚ್ಚುವರಿ ಅಡ್ವೋಕೇಟ್ ಜನರಲ್– II, ಬೆಂಗಳೂರು ಇವರು ತಮ್ಮ ಪತ್ರದೊಂದಿಗೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 28–01–2013 ರಂದು ರಿಟ್ ಅರ್ಜಿ ಸಂಖ್ಯೆ : 8087/2009 (ಎಂ.ವಿ.) ಪ್ರಕರಣದಲ್ಲಿ ನೀಡಿದ ಆದೇಶದ ಪ್ರತಿಯನ್ನು ಕಳುಹಿಸುತ್ತಾರೆ. ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಪ್ರಕರಣದಲ್ಲಿ ಸಾರಿಗೆ ಇಲಾಖೆ ವ್ಯಾಪ್ತಿಯಲ್ಲಿ ಹೊರಡಿಸಲಾಗುವ ಆದೇಶ/ಲೇಖನಗಳು/ಹಿಂಬರಹಗಳಲ್ಲಿ ಸಹಿ ಮಾಡಿದ ಅಧಿಕಾರಿಗಳ ಹೆಸರನ್ನು ಸ್ಪಷ್ಟವಾಗಿ ನಮೂದಿಸದೇ ಇರುವುದರಿಂದ ಅಂತಹ ಸಹಿ ಮಾಡಿರುವ ಅಧಿಕಾರಿಗಳನ್ನು ಪತ್ತೆಹಚ್ಚುವಲ್ಲಿ ಕಷ್ಟಕರವಾಗಿರುವುದನ್ನು ಗಮನಿಸಿ ಈ ಬಗ್ಗೆ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೆ ಸೂಚನೆಗಳನ್ನು ನೀಡಬೇಕೆಂದು ಆದೇಶಿಸಿರುತ್ತದೆ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಇಲಾಖೆಯ ಎಲ್ಲಾ ಅಧಿಕಾರಿಗಳಿಗೂ ಈ ಬಗ್ಗೆ ಅಗತ್ಯ ಸೂಚನೆಗಳನ್ನು ನೀಡಬೇಕೆಂದು ಹೆಚ್ಚುವರಿ ಅಡ್ವೋಕೇಟ್ ಜನರಲ್– II ಇವರು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಸಾರಿಇ 13 ಸಾಇನ್ಯಾ 2013, ಬೆಂಗಳೂರು, ದಿನಾಂಕ : 25–3–2013.**

ಸಾರಿಗೆ ಇಲಾಖೆಯ ಕಾರ್ಯ ವ್ಯಾಪ್ತಿಯಲ್ಲಿ ಹೊರಡಿಸುವ ಎಲ್ಲಾ ಆದೇಶಗಳು/ಲೇಖನಗಳು/ಹಿಂಬರಹಗಳಲ್ಲಿ ಸಹಿ ಮಾಡುವ ಅಧಿಕಾರಿಗಳು ತಮ್ಮ ಸಹಿಯ ಕೆಳಗೆ ಹೆಸರನ್ನು ಸ್ಪಷ್ಟವಾಗಿ ಹಾಗೂ ಕಛೇರಿ ದೂರವಾಣಿ ಸಂಖ್ಯೆಯನ್ನು ನಮೂದಿಸುವಂತೆ ಈ ಮೂಲಕ ಆದೇಶಿಸಲಾಗಿದೆ.

ಈ ಆದೇಶವನ್ನು ಉಲ್ಲಂಘಿಸಿದ ಅಧಿಕಾರಿಗಳನ್ನು ನಿಯಮಾನುಸಾರ ಶಿಸ್ತು ಕ್ರಮಕ್ಕೆ ಗುರಿ ಪಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

**P.R. 550**
**SC - 100**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಚಂದ್ರಕಲಾ ಎಸ್., ಮ.ಪಿ.ಐ. ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/2/ ಸಿಓಪಿ/12/ಆರ್–7/2011, ದಿನಾಂಕ: 07–05–11
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)62/2011–12 (ಓ.ಬಿ. ಸಂಖ್ಯೆ: 31/2012), ದಿನಾಂಕ: 28–03–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10–06–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ(8)62/2011–12, ದಿನಾಂಕ: 11–10–2012
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 188 ಸಿಎನ್‌ಎಸ್ 2012, ದಿನಾಂಕ: 01–04–2013

**ಪ್ರಸ್ತಾವನೆ:**

ಶ್ರೀಮತಿ ಚಂದ್ರಕಲಾ ಎಸ್., ಮ.ಪಿ.ಐ. ಬಸವನಗುಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀಮತಿ ಚಂದ್ರಕಲಾ ಎಸ್., ಮ.ಪಿ.ಐ. ಆದ ನೀವು ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 10–05–2010ರಂದು ಗಸ್ತಿನಲ್ಲಿ ನಿಮ್ಮ ಠಾಣೆಯ ಸಿಬ್ಬಂದಿಯವರಾದ ಶ್ರೀ ಮುತ್ತಾನಾಯಕ್, ಪಿ.ಸಿ. 9446 ಮತ್ತು ಶ್ರೀ ಶಶಿಧರ್ ಎಸ್. ಪಿ.ಸಿ. 5541 ರವರುಗಳು ಅನುಮಾನಾಸ್ಪದ ವ್ಯಕ್ತಿಗಳಾದ 1) ಧನಂಜಯ ಮತ್ತು 2) ರಘು ಎಂಬುವವರನ್ನು ಹಿಡಿದು ಪೊಲೀಸ್ ಠಾಣೆಗೆ ಕರೆದುಕೊಂಡು ಬಂದು ಅವರ ಹತ್ತಿರವಿದ್ದ ಒಂದು ಚಾಕು ಮತ್ತು ಒಂದು ಬಜಾಜ್ ಪಲ್ಸರ್ ಕೆಎ–05 ಇವಿ–4262 ವಾಹನವನ್ನು ಠಾಣೆಗೆ ತಂದು ಹಾಜರುಪಡಿಸಿರುತ್ತಾರೆ. ಸದರಿ ವಾಹನ ಹನುಮಂತನಗರ ಪೊಲೀಸ್ ಠಾಣೆಯ ಮೊ.ಸಂ. 372/2009 ಕಲಂ 379 ಐ.ಪಿ.ಸಿ.ರ ಕೇಸಿನಲ್ಲಿ ಕಳುವಾಗಿದ್ದ ವಾಹನವೆಂದು ನಿಮಗೆ ತಿಳಿದಿದ್ದರೂ ಆರೋಪಿಗಳಾದ ಧನಂಜಯ ಮತ್ತು ರಘು ಎಂಬುವವರನ್ನು ದಸ್ತಗಿರಿ ಮಾಡಿ ಕೂಲಂಕುಷವಾಗಿ ವಿಚಾರಣೆ ಮಾಡದೆ ಆರೋಪಿಗಳನ್ನು 109 ಸಿ.ಆರ್.ಪಿ.ಸಿ. ಪ್ರಕರಣದಲ್ಲಿ ನ್ಯಾಯಾಲಯಕ್ಕೆ ಕಳುಹಿಸಿ ಆರೋಪಿಗಳನ್ನು ಪುನಃ ಪೊಲೀಸ್ ಠಾಣೆಗೆ ಕರೆಯಿಸುವ ಅಗತ್ಯವಿಲ್ಲದಿದ್ದರೂ ಸಹ ಅವರುಗಳನ್ನು ಪುನಃ ಕರೆಯಿಸಿ ಸದರಿ ಸಿಬ್ಬಂದಿಯವರ ವರದಿ ಪಡೆಯದೆ ಅವರು ಮನೆಗೆ ಹೋದ ಮೇಲೆ ರಾತ್ರಿ ಸಿಬ್ಬಂದಿಯವರ ಕಡೆಯಿಂದ ವರದಿ ಪಡೆದು ಕಲಂ 109 ಸಿ.ಆರ್.ಪಿ.ಸಿ. ರಡಿಯಲ್ಲಿ ದಸ್ತಗಿರಿ ಮಾಡಿರುತ್ತೀರಿ. ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ಆರೋಪಿಗಳಿಗೆ ಸಹಾಯ ಮಾಡುವ ಉದ್ದೇಶದಿಂದ ಕಳವು ಕೇಸಿನಲ್ಲಿ ದಸ್ತಗಿರಿ ಮಾಡದೆ ಕಲಂ 109 ಸಿ.ಆರ್.ಪಿ.ಸಿ.ರಡಿಯಲ್ಲಿ ದಸ್ತಗಿರಿ ಮಾಡಿ ವಾಹನ ಅಮಾನತ್ತುಪಡಿಸಿಕೊಳ್ಳದೇ ಆರೋಪಿಗಳನ್ನು ಬಿಟ್ಟು ಕಳುಹಿಸಿ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 07–05–2011ರ ಆದೇಶದಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು (1) ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–03–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 62 ಪೊಸಿಅ 2012, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಚಂದ್ರಕಲಾ ಎಸ್., ಮ.ಪಿ.ಐ. ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ದಿನಾಂಕ: 07–05–2011ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರಿಗೆ ವಾಗ್ದಂಡನೆ (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 543**

**SC - 30**

## ಸಹಕಾರ, ಸಚಿವಾಲಯ

**ವಿಷಯ:** ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಇದರ ಆಡಳಿತ ಮಂಡಳಿಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 30(1)ರ ಅನ್ವಯ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಆದೇಶವನ್ನು ಪುನರ್ ಪರಿಶೀಲಿಸುವ ಬಗ್ಗೆ.

**ಓದಲಾಗಿದೆ:**

1. ಚುನಾವಣಾಧಿಕಾರಿಗಳು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ ಹಾಗೂ ಉಪ ವಿಭಾಗಾಧಿಕಾರಿಗಳು, ದಾವಣಗೆರೆ ಉಪವಿಭಾಗ ರವರ ಆದೇಶ ಸಂಖ್ಯೆ: ಚುಸಿಆರ್–1–3–2008–09, ದಿನಾಂಕ: 30.05.2009.
2. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಎಸ್‌ಕೆ/ ಇಎಸ್‌ಟಿಎಸ್–68–2008–09, ದಿನಾಂಕ: 30.11.2009.
3. ಶ್ರೀ ಹೆಚ್.ಎಸ್. ಶಿವಶಂಕರ್, ಅಧ್ಯಕ್ಷರು ಮತ್ತು ಶ್ರೀಮತಿ ಲೀಲಾ ಓಂಕಾರಪ್ಪ, ನಿರ್ದೇಶಕರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ ರವರ ಪತ್ರ ದಿನಾಂಕ: 15.12.2009.
4. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರ ಆದೇಶ ಸಂಖ್ಯೆ:ಡಿಎಸ್‌ಕೆ/ಇಎಸ್‌ಟಿಎಸ್–68–2008–09, ದಿನಾಂಕ: 08.01.2010.
5. ಸಹಕಾರ ಸಂಘಗಳ ನಿಬಂಧಕರು ರವರ ಆದೇಶ ಸಂಖ್ಯೆ:ಅನಿ/55/ಕೈಸಸಂ–2/ಆವಿ/2010–11, ದಿನಾಂಕ:16.09.2010 ಹಾಗೂ 29.12.2010.
6. ಸರ್ಕಾರದ ಆದೇಶ ಸಂಖ್ಯೆ: ಸಿಓ 02 ಸಸಕಾ 2011, ದಿನಾಂಕ: 27.06.2011.
7. ಶ್ರೀಮತಿ ಲೀಲಾ ಓಂಕಾರಪ್ಪ ರವರು ಘನ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿರುವ ರಿಟ್ ಅರ್ಜಿ ಸಂಖ್ಯೆ:35314/2011.
8. ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 35314/2011ರಲ್ಲಿ ದಿನಾಂಕ: 21.02.2012 ಮತ್ತು 28.08.2012 ರಂದು ಹೊರಡಿಸಿರುವ ಆದೇಶಗಳು.

**ಪ್ರಸ್ತಾವನೆ:**

1. ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ ಇದು ದಿನಾಂಕ: 08.05.1969ರಂದು ನೋಂದಣಿಯಾಗಿ ರಾಜ್ಯ ಸರ್ಕಾರವು ಸೇರಿದಂತೆ ಸದರಿ ಕಾರ್ಖಾನೆಯಲ್ಲಿ ಒಟ್ಟು 7,178 ಸದಸ್ಯರಿದ್ದು ಇವರಿಂದ ರೂ.461.92 ಲಕ್ಷಗಳ ಷೇರು ಬಂಡವಾಳ ಹೊಂದಿರುತ್ತದೆ. ಕಾರ್ಖಾನೆಯಲ್ಲಿ ದಿನಾಂಕ: 31.03.2012ಕ್ಕೆ ಒಟ್ಟು 277 ಜನ ನೌಕರರು / ಕಾರ್ಮಿಕರು ಇರುತ್ತಾರೆ. ಕಾರ್ಖಾನೆಯು 1800 ಮೆಟ್ರಿಕ್ ಟನ್ ಕಬ್ಬು ಅರೆಯುವ ಸಾಮರ್ಥ್ಯವನ್ನು ಹೊಂದಿರುತ್ತದೆ.
2. ಕಾರ್ಖಾನೆಯು 1978–79 ರಿಂದ 2003–04ನೇ ಸಾಲುಗಳವರೆಗೆ ಕಬ್ಬು ನುರಿಸುವ ಕಾರ್ಯವನ್ನು ಕೈಗೊಂಡಿದ್ದು, 2001–02, 2002–03ನೇ ಸಾಲುಗಳಲ್ಲಿ ಪ್ರಕೃತಿ ವಿಕೋಪದಿಂದ ಮಳೆ ಕಡಿಮೆಯಾಗಿ, ಭದ್ರಾ ಡ್ಯಾಂನಲ್ಲಿ ನೀರಿನ ಪ್ರಮಾಣ ಕಡಿಮೆಯಾಗಿ, ಕಾರ್ಖಾನೆ ವ್ಯಾಪ್ತಿಯಲ್ಲಿ ಕಬ್ಬು ನಾಟಿ ಪ್ರಗತಿ ಕುಂಠಿತವಾಗುದಲ್ಲದೇ, ಪವರ್ ಟರ್ಬೈನ್ ಯಾಂತ್ರಿಕ ತೊಂದರೆಯಿಂದ ಕಬ್ಬು ನುರಿಸುವ ಪ್ರಮಾಣ ಕಡಿಮೆಯಾಗಿ, ಕಾರ್ಖಾನೆಯು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿ ದಿನಾಂಕ: 10.07.2004 ರಿಂದ 6 ತಿಂಗಳ ಅವಧಿಗೆ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಲೇ–ಆಫ್ ಘೋಷಿಸಿ, ಲೇ ಆಫ್ ಅವಧಿಯನ್ನು ವಿಸ್ತರಿಸಿ 2004–05 ರಿಂದ 2010ರವರೆಗೆ ಕಬ್ಬು ನುರಿಸುವ ಕಾರ್ಯ ಸ್ಥಗಿತಗೊಂಡಿರುತ್ತದೆ.
3. ಕಾರ್ಖಾನೆಯ ಆಡಳಿತ ಮಂಡಳಿಯು ಕಾರ್ಖಾನೆಯನ್ನು ಪುನಶ್ಚೇತನಗೊಳಿಸಿ, ಕಬ್ಬು ಅರೆಯುವ ಕಾರ್ಯವನ್ನು ಕೈಗೊಳ್ಳುವಲ್ಲಿ ವಿಫಲರಾಗಿರುವುದಲ್ಲದೇ, ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆಗೆ ನೀಡುವ ಮೂಲಕ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಕ್ರಮವನ್ನು ಕೈಗೊಳ್ಳುವಲ್ಲಿ ಸಹ ವಿಫಲವಾಗಿದ್ದು ಕಾರ್ಖಾನೆಯು ದಿನಾಂಕ: 31.03.2012ಕ್ಕೆ ರೂ.8780.97 ಲಕ್ಷಗಳ ಕ್ರೋಢೀಕೃತ ನಷ್ಟದಲ್ಲಿದೆ.
4. ಮೇಲೆ ಓದಲಾದ (1)ರಲ್ಲಿನ ಆದೇಶದನ್ವಯ ಚುನಾವಣಾಧಿಕಾರಿಗಳು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ ಹಾಗೂ ಉಪ ವಿಭಾಗಾಧಿಕಾರಿಗಳು ದಾವಣಗೆರೆ ಉಪವಿಭಾಗರವರು ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಇದರ ಆಡಳಿತ ಮಂಡಳಿಗೆ ದಿನಾಂಕ: 30.05.2009ರ ಚುನಾವಣಾ ಘೋಷಣೆಯಂತೆ 15 ಜನ ನಿರ್ದೇಶಕರು ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ಈ ಆಡಳಿತ ಮಂಡಳಿಯ ಅಧಿಕಾರಾವಧಿಯು 2009–10 ರಿಂದ 2013–14ನೇ ಸಾಲುಗಳ 05 ಸಹಕಾರ ವರ್ಷಗಳ ಅವಧಿಗೆ ಅಂದರೆ ದಿನಾಂಕ:31.03.2014ರ ವರೆಗೆ ಇರುತ್ತದೆ ಎಂದು ಆದೇಶಿಸಿರುತ್ತಾರೆ.
5. ಮೇಲೆ ಓದಲಾದ (2)ರಲ್ಲಿನ ದಿನಾಂಕ: 30.11.2009ರ ಆದೇಶದನ್ವಯ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1) ರಂತೆ ಕ್ರಮ ಜರುಗಿಸಲು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ಇದರ ಆಡಳಿತ ಮಂಡಳಿ ಸದಸ್ಯರ ವಿರುದ್ಧ 29 ಆರೋಪಗಳನ್ನು ಹೊರಿಸಿ ಕಾರಣ ಕೇಳಿ ನೋಟೀಸನ್ನು ನೀಡಿರುತ್ತಾರೆ.

   ಸದರಿ ನೋಟೀಸಿನಲ್ಲಿ ಆಡಳಿತ ಮಂಡಳಿ ಸದಸ್ಯರ ವಿರುದ್ಧ ಮಾಡಲಾದ ಆರೋಪಗಳು ಕೆಳಕಂಡಂತಿರುತ್ತವೆ.

1, 2& 5. ಸಹಕಾರ ಅಧಿನಿಯಮಕ್ಕೆ ಆಗಾಗ್ಗೆ ತಿದ್ದುಪಡಿಗಳಿಗೆ ಅನುಸಾರವಾಗಿ ಕಾರ್ಖಾನೆಯ ಉಪನಿಯಮಗಳಿಗೆ ಅಳವಡಿಸಿಕೊಳ್ಳದೆ ಇರುವುದು.

3. ಕಾರ್ಖಾನೆಯ ಆಡಳಿತ ವ್ಯಾಪ್ತಿ ನಿಖರವಾಗಿ ಮಾರ್ಪಾಡು ಆಗಿರದ ಕಾರಣ ಕಾರ್ಖಾನೆಯ ಸದಸ್ಯತ್ವದಲ್ಲಿ ಗೊಂದಲ ಉಂಟಾಗಿರುವುದು.

4. ಕಾರ್ಖಾನೆಯ ಉಪನಿಯಮ 4 ರಂತೆ ಆರ್ಥಿಕ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಸಂಬಂಧ ಕ್ರಮ ಕೈಗೊಳ್ಳದಿರುವುದು

6. ಕಬ್ಬು ಬೆಳೆಗಾರರಲ್ಲದ 'ಸಿ' ಮತ್ತು 'ಇ' ದರ್ಜೆ ನಮೂದಿಸಿರುವ ಸದಸ್ಯರು ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುತ್ತಿದ್ದು, ಇವರನ್ನು ಉಪನಿಯಮ 5(ಎ) ರೀತ್ಯಾ 'ಎ' ದರ್ಜೆ ಸದಸ್ಯರನ್ನಾಗಿ ಮಾಡಿಕೊಳ್ಳಲು ಕ್ರಮ ವಹಿಸದಿರುವುದು.

7. ಕಬ್ಬು ಬೆಳೆ ಅಭಿವೃದ್ಧಿ ಪಡಿಸಲು ವಿಫಲ – ಉಪನಿಯಮ

8 & 9. (33)ರ ಉಲ್ಲಂಘನೆ ಉಪನಿಯಮ 6(2) & 21(2)ರಲ್ಲಿ ಸದಸ್ಯರು ಹಕ್ಕು ಚಲಾವಣೆ ಸಂಬಂಧ ಕಡ್ಡಾಯವಾಗಿ ಕಬ್ಬು ಸರಬರಾಜು ಮಾಡಬೇಕೆಂಬ ವ್ಯವಹಾರಿಕೆ ನಿರ್ಬಂಧ ವಿಧಿಸಲಾಗಿರುವುದಿಲ್ಲವಾದ್ದರಿಂದ ಕಾರ್ಖಾನೆಯ ಹಿತಾಸಕ್ತಿಗೆ ಧಕ್ಕೆ ಉಂಟು ಮಾಡಿದೆ.

ಕಬ್ಬು ಬೆಳೆಗಾರರಲ್ಲದ ಹಾಗೂ ಕಾರ್ಖಾನೆಗೆ ಸದಸ್ಯರು ಸಹ ಆಗಿಲ್ಲದ ಒಬ್ಬರನ್ನು (ಜೆ.ಬಿ. ಸತ್ಯನಾರಾಯಣ), ನಿರ್ದೇಶಕರಾಗಿ ಕೋ–ಆಪ್ಟ್ ಮಾಡಿಕೊಂಡಿರುವುದು – ಉಪನಿಯಮಗಳ ಉಲ್ಲಂಘನೆ ಆಗಿದೆ.

11 ರಾಜ್ಯ ಸರ್ಕಾರದ / ಎನ್.ಸಿ.ಡಿ.ಸಿ. ಇನ್ನಿತರ ಸಂಸ್ಥೆಗಳಿಂದ ಪಡೆದ ಸಾಲಗಳು ಸುಸ್ತಿಯಾಗಿದ್ದು ಮರುಪಾವತಿ ಮಾಡಿಲ್ಲ.

12 2001–02 ರಿಂದ 2003–04 ರವರೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಪಾವತಿ ಮಾಡದಿರುವುದು.

13. ಕಾರ್ಖಾನೆ ಅಕ್ಟೋಬರ್ 2003 ರಿಂದ ಸ್ಥಗಿತವಾಗಿದೆ. ದಿನಾಂಕ: 20.07.2004 ರಿಂದ ಲೇ ಆಫ್ ಘೋಷಿಸಲಾಗಿದೆ – 16 ಜನ ಹೊಸ ನೌಕರರ ನೇಮಕಾತಿ – ನಿಯಮಗಳ ಉಲ್ಲಂಘನೆ.

14. ಸಕ್ರಮ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ ಕಾರ್ಖಾನೆಗೆ ಸೇರಿದ ಸರ್ವೆ ಸಂಖ್ಯೆ: 34(ಎ) ಮತ್ತು 35ರ ಜಮೀನಿನಿಂದ ಮಣ್ಣನ್ನು ತೆಗೆದು ಸಾಗಾಣಿಕೆ ಮಾಡಲು ದಿನಾಂಕ: 03.07.2007ರಂದು ಆಡಳಿತ ಸಮಿತಿ ತೀರ್ಮಾನಿಸಿರುವುದು.

15. 2002–03ನೇ ಸಾಲಿನಲ್ಲಿ ರಫ್ತು ಮಾಡಲಾದ ಸಕ್ಕರೆ ಬಾಬ್ತು ವ್ಯವಹಾರವು ಕಾರ್ಖಾನೆಗೆ ಹಾನಿಕರವಾಗಿರುವುದು.

16. ಟೆಂಡರ್ ಕರೆಯದೆ ಬ್ರೌನ್ ಶುಗರ್ ಮಾರಾಟ ಮಾಡಿರುವುದು.

17. 2001ನೇ ಸಾಲಿನಿಂದ ಲೀಗಲ್ ಚಾರ್ಜಸ್ ರೂ.5.67 ಲಕ್ಷ ವೆಚ್ಚ ಮಾಡಿರುವುದು.

18. 2002–03ರ ತಾಂತ್ರಿಕ ಸಮಸ್ಯೆಗೆ ಸಕಾಲದಲ್ಲಿ ಸ್ಪಂದಿಸದೆ ಇರುವುದು.

19. ಹಳೆಯ ಟರ್ಬನ್ ರಿಪೇರಿ ಹಾಗೂ ಸಕಾಲದಲ್ಲಿ ಹೊಸ ಟರ್ಬನ್ ಅಳವಡಿಸದೆ ಇರುವುದು.

20. ವಾಹನಗಳ ದುರಸ್ಥಿ

21. ಉಗ್ರಾಣದಲ್ಲಿನ ಹಳೆಯ ವಸ್ತುಗಳನ್ನು ವಿಲೇವಾರಿ ಮಾಡದೆ ಇರುವುದು.

22. ಏರಿಯಾ ಡವಲಪ್‌ಮೆಂಟ್ ಫಂಡ್ ರೂ.259.39 ಲಕ್ಷ ಪ್ರತ್ಯೇಕವಾಗಿ ಠೇವಣಿ ಮಾಡದಿರುವುದು.

23. ಸಕ್ಕರೆ ಅಭಿವೃದ್ಧಿ ನಿಧಿಯಿಂದ ರೈತರಿಗೆ ನೀಡಿದ ಸಾಲ ವಸೂಲಾತಿಗೆ ಕ್ರಮ ಜರುಗಿಸದೆ ಇರುವುದು.

24. ನಿಗದಿಪಡಿಸಿದ ಮೊತ್ತಕ್ಕಿಂತ ಹೆಚ್ಚು ನಗದು ಶಿಲ್ಕು ಉಳಿಸಿಕೊಂಡಿರುವುದು.

25. ಹಂಗಾಮಿ ನೌಕರರ ನೇಮಕಾತಿ – ನಿಯಮಗಳ ಉಲ್ಲಂಘನೆ

26. ಗುತ್ತಿಗೆ ನೌಕರರನ್ನು ಖಾಯಂ ಮಾಡಿರುವುದು

27. ಕಾರ್ಖಾನೆ 2004 ರಿಂದ ಸ್ಥಗಿತಗೊಂಡಿದ್ದರೂ ಸಿಬ್ಬಂದಿಗೆ ಮುಂಗಡ ನೀಡಿರುವುದು.

28. 2006–07, 2007–08 ಆಡಿಟ್ ಪೂರ್ಣಗೊಳಿಸುವಲ್ಲಿ ಹಾಗೂ ಹಿಂದಿನ ನ್ಯೂನತೆಗಳನ್ನು ಸರಿಪಡಿಸಲು ವಿಫಲ.

29. ಸದಸ್ಯತ್ವ ಕಬ್ಬು ಸರಬರಾಜು ಹಾಗೂ ತಾಂತ್ರಿಕ ವಿಷಯಗಳನ್ನು ತನಿಖೆಗೆ ನೀಡದೆ ಇರುವುದು.

6. ಮೇಲೆ ಓದಲಾದ (3)ರ ಪತ್ರಗಳಲ್ಲಿ ಕ್ರಮವಾಗಿ ಶ್ರೀ ಹೆಚ್.ಎಸ್. ಶಿವಶಂಕರ, ಅಧ್ಯಕ್ಷರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ಹಾಗೂ ಶ್ರೀಮತಿ ಲೀಲಾ ಓಂಕಾರಪ್ಪ, ನಿರ್ದೇಶಕರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ ರವರು, ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ನೀಡಿರುವ ನೋಟೀಸಿಗೆ ಸಮಜಾಯಿಷಿ ಸಲ್ಲಿಸಿ ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

7. ನೋಟೀಸಿನಲ್ಲಿನ ಆರೋಪಗಳ ಸಂಬಂಧ ಅರ್ಜಿದಾರರಾದ ಶ್ರೀಮತಿ ಲೀಲಾ ಓಂಕಾರಪ್ಪ ರವರು ದಿನಾಂಕ: 15.11.2009 ರಲ್ಲಿ ಸಮಜಾಯಿಷಿ ನೀಡಿದ್ದಾರೆ. ಆದರೆ, ಪ್ರತಿ ಆರೋಪಕ್ಕೆ ನಿರ್ದಿಷ್ಟವಾಗಿ ಸಮಜಾಯಿಷಿ ನೀಡಿರುವುದಿಲ್ಲ. ಎಲ್ಲಾ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಆದರೆ, ಅರ್ಜಿದಾರರು ಸೇರಿದಂತೆ ಸಂಪೂರ್ಣ ಆಡಳಿತ ಮಂಡಳಿ ನೂತನವಾಗಿ 2009–2010 ರಿಂದ 2013–2014ರ ಅವಧಿಗೆ ದಿನಾಂಕ: 04.06.2009 ರಂದು ನಡೆದ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ದಿನಾಂಕ: 24.06.2009 ರಂದು ಅಧ್ಯಕ್ಷರು/ಉಪಾಧ್ಯಕ್ಷರ ಚುನಾವಣೆ ನಡೆದಿರುತ್ತದೆ. ದಿನಾಂಕ: 26.08.2009 ಮತ್ತು 31.10.2009ರಂದು ಆಡಳಿತ ಮಂಡಳಿ ಸಭೆಗಳು ನಡೆದಿರುತ್ತದೆ. ಅವರ ಆಯ್ಕೆ ಪೂರ್ವದಲ್ಲಿಯೇ ನಡೆದಿರಬಹುದಾದ ಅವ್ಯವಹಾರಗಳಿಗೆ ಅರ್ಜಿದಾರರನ್ನು ಉತ್ತರದಾಯಿತ್ವ ಮಾಡುವುದು ಕಾನೂನು ಬಾಹಿರ ಎಂದು ಸಮಜಾಯಿಷಿಯಲ್ಲಿ ತಿಳಿಸಿರುತ್ತಾರೆ. ಆರೋಪಗಳು ಅರ್ಜಿದಾರರು ಆಯ್ಕೆಯಾದ ನಂತರದ ಅವಧಿಯಲ್ಲಿ ನಡೆದಿರುವುದಿಲ್ಲವಾದ್ದರಿಂದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

8. ಕಾರ್ಖಾನೆಯ ಅಂದಿನ ಅಧ್ಯಕ್ಷರಾದ ಶ್ರೀ ಹೆಚ್.ಎಸ್. ಶಿವಶಂಕರ್ ರವರು ದಿನಾಂಕ: 15.12.2009 ರಂದು ಸಮಾಜಾಯಿಷಿಯಲ್ಲಿ ಆರೋಪವಾರು ಸಮಾಜಾಯಿಷಿ ನೀಡಿರುತ್ತಾರೆ. ದಿನಾಂಕ: 24.06.2009 ರಂದು ಕಾರ್ಖಾನೆಯ ಹೊಸ ಸಮಿತಿ ಅಸ್ತಿತ್ವಕ್ಕೆ ಬಂದಿದ್ದು ಈ ಪೂರ್ವದಲ್ಲಿ ಗತಿಸಿದ ಘಟನೆಗಳಿಗೆ ಹಾಗೂ ತಪ್ಪುಗಳಿಗೆ ನೂತನವಾಗಿ ಆಯ್ಕೆಯಾಗಿರುವ ಆಡಳಿತ ಮಂಡಳಿ ಯಾವುದೇ ಉತ್ತರದಾಯಿತ್ವ ಹೊಂದಿರುವುದಿಲ್ಲವೆಂದು ಸಮಜಾಯಿಷಿ ನೀಡಿರುತ್ತಾರೆ. ನೋಟೀಸ್‌ನಲ್ಲಿ ಪ್ರಸ್ತಾಪಿಸಿರುವ ಆರೋಪಗಳು ಆಡಳಿತ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಆಡಳಿತದಲ್ಲಿ ನಡೆಯಬಹುದಾದ ಲೋಪದೋಷಗಳಾಗಿವೆ. ಯಾವುದೇ ಆರೋಪಗಳು ಗಂಭೀರ ಸ್ವರೂಪದ ಹಾಗೂ ಹಣ ದುರುಪಯೋಗದ ಆರೋಪಗಳಲ್ಲ ಮತ್ತು ಎಲ್ಲಾ

ಸರಿಪಡಿಸಬಹುದಾದ ನ್ಯೂನ್ಯತೆಗಳಾಗಿರುತ್ತವೆ ಎಂದು ತಿಳಿಸಿರುತ್ತಾರೆ. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರ ಬಗ್ಗೆ ಗೌರವ ಉಚ್ಚ ನ್ಯಾಯಾಲಯವು ಶ್ರೀ ಎಂ. ಶ್ರೀನಿವಾಸರೆಡ್ಡಿ ಮತ್ತು ಇತರ ವಿರುದ್ಧ ಸಹಕಾರ ಸಂಘಗಳ ನಿಬಂಧಕರು ಮತ್ತು ಇತರರು 2000(5) ಕೆ.ಎ.ಆರ್.ಎಲ್.ಜೆ. 365ಎ ಪ್ರಕಾರ ಈ ರೀತಿಯ ಕ್ರಮಗಳು ಆತುರವಾದ ಮತ್ತು ವಿವೇಚನಾ ರಹಿತವಾದ, ನಿರಂಕುಶ ಅಧಿಕಾರದ (Arbitrary exercise of power) ಕ್ರಮವಾಗಿರುತ್ತದೆ ಎಂದು ಉದಾಹರಣೆ ನೀಡಿರುತ್ತಾರೆ.

9. ಮೇಲೆ ಓದಲಾದ (4)ರ ದಿನಾಂಕ: 08.01.2010ರ ಆದೇಶದನ್ವಯ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ಇದರ ಆಡಳಿತ ಮಂಡಳಿಯನ್ನು 06 ತಿಂಗಳ ಅವಧಿಗೆ ರದ್ದುಪಡಿಸಿ, ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರನ್ನು ಸದರಿ ಕಾರ್ಖಾನೆಯ ಆಡಳಿತಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ.

10. ಮೇಲೆ ಓದಲಾದ (5)ರಲ್ಲಿನ ಆದೇಶಗಳನ್ವಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಇದರ ಆಡಳಿತಗಾರರ ಅವಧಿಯನ್ನು ಕಬ್ಬು ಆಯುಕ್ತರ ಶಿಫಾರಸ್ಸಿನನ್ವಯ ದಿನಾಂಕ: 16.09.2010 ಹಾಗೂ ದಿನಾಂಕ: 29.12.2010ರ ಆದೇಶಗಳಲ್ಲಿ ಕ್ರಮವಾಗಿ 6 ತಿಂಗಳ ಅವಧಿಗೆ ವಿಸ್ತರಿಸಿರುತ್ತಾರೆ.

11. ಮೇಲೆ ಓದಲಾದ (6)ರ ಸರ್ಕಾರದ ಆದೇಶದನ್ವಯ ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ಕಬ್ಬು ಆಯುಕ್ತರ ಹಾಗೂ ಸಹಕಾರ ಸಂಘಗಳ ನಿಬಂಧಕರ ಶಿಫಾರಸ್ಸಿನ ಮೇಲೆ ದಿನಾಂಕ: 08.07.2011 ರಿಂದ ದಿನಾಂಕ: 07.07.2014 ರವರೆಗೆ ವಿಸ್ತರಿಸಲಾಗಿದೆ.

12. ಮೇಲೆ ಓದಲಾದ (7)ರ ರಿಟ್ ಅರ್ಜಿ ಸಂಖ್ಯೆ:35314/2011 ರಲ್ಲಿ ಶ್ರೀಮತಿ ಲೀಲಾ ಓಂಕಾರಪ್ಪ ರವರು ಘನ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣವನ್ನು ದಾಖಲಿಸಿ, ದಿನಾಂಕ: 08.01.2010, 16.09.2010, 29.12.2010 ಹಾಗೂ ದಿನಾಂಕ:27.06.2011 ರಂದು ಹೊರಡಿಸಿರುವ ಆದೇಶಗಳನ್ನು ರದ್ದುಪಡಿಸುವಂತೆ ಘನ ನ್ಯಾಯಾಲಯವನ್ನು ಕೋರಿರುತ್ತಾರೆ.

13. ಗೌರವ ಉಚ್ಚ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 35314/2011ರಲ್ಲಿ ದಿನಾಂಕ: 21.02.2012ರ ಆದೇಶದಲ್ಲಿ 4ನೇ ಎದುರು ಅರ್ಜಿದಾರರಾದ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಅರ್ಜಿದಾರರಿಗೆ ನೀಡಿರುವ ಕಾರಣ ಕೇಳುವ ನೋಟೀಸಿಗೆ ಅರ್ಜಿದಾರರಾದ ಕಾರ್ಖಾನೆಯ ನಿರ್ದೇಶಕರು ನೀಡಿರುವ ಸಮಜಾಯಿಷಿಯನ್ನು ಪರಿಗಣಿಸಿರುವುದಿಲ್ಲವೆಂದು ಮತ್ತು ನಾಲ್ಕನೇ ಎದುರು ಅರ್ಜಿದಾರರು ಕಾರ್ಖಾನೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಅರ್ಜಿದಾರರ ಹಕ್ಕುಗಳಿಗೆ ಮಾನ್ಯತೆ ನೀಡಿಲ್ಲವೆಂದು ಅಭಿಪ್ರಾಯಪಟ್ಟಿರುತ್ತದೆ. ಪ್ರಶ್ನಿತ ದಿನಾಂಕ: 27.06.2011, 08.01.2010, 16.09.2010 ಮತ್ತು 29.12.2010ರ ಆದೇಶಗಳಿಂದ ಅರ್ಜಿದಾರರು ಭಾದಿತರಾಗಿರುವರೆಂದು ನ್ಯಾಯಾಲಯ ಅಭಿಪ್ರಾಯಪಟ್ಟಿರುತ್ತದೆ.

14. ಅರ್ಜಿದಾರರು ನೀಡಿರುವ ಉತ್ತರವನ್ನು ಪರಿಗಣಿಸದೆ ಕಾರ್ಖಾನೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಆಡಳಿತಾಧಿಕಾರಿಯನ್ನು ನೇಮಿಸಿರುವುದು ಮತ್ತು ಮುಂದುವರೆದಂತೆ ಆಡಳಿತಾಧಿಕಾರಿಯ ಅವಧಿಯನ್ನು ಶಾಸನಬದ್ಧ ಅವಧಿ ಒಂದು ವರ್ಷ ಮೀರಿ ನಾಲ್ಕು ವರ್ಷಗಳಿಗೆ ಮುಂದುವರೆಸಿರುವುದು ನ್ಯಾಯಸಮ್ಮತವಲ್ಲವೆಂದು ಮತ್ತು ಪ್ರಾರಂಭದಲ್ಲೇ ಅರ್ಜಿದಾರರು ನೀಡಿರುವ ಉತ್ತರವನ್ನು ಪರಿಗಣಿಸಿ ಆದೇಶ ಹೊರಡಿಸಬೇಕಾಗಿತ್ತೆಂದು ನ್ಯಾಯಾಲಯ ಅಭಿಪ್ರಾಯಪಟ್ಟಿರುತ್ತದೆ.

15. ಮುಂದುವರೆದಂತೆ, ಅಂತಿಮವಾಗಿ ಮೇಲೆ ಓದಲಾದ (8)ರ ದಿನಾಂಕ: 21.02.2012 ಹಾಗೂ 28.08.2012ರ ಆದೇಶಗಳಲ್ಲಿ ಘನ ಉಚ್ಚ ನ್ಯಾಯಾಲಯವು ಸರ್ಕಾರದ ದಿನಾಂಕ:27.06.2011ರ ಆದೇಶವನ್ನು ರದ್ದುಗೊಳಿಸಿರುತ್ತದೆ ಮತ್ತು ಪ್ರತಿವಾದಿ–1 ರಾಜ್ಯ ಸರ್ಕಾರವು ಅರ್ಜಿದಾರರು ಸಲ್ಲಿಸಿರುವ ಸಮಜಾಯಿಷಿಯನ್ನು ಪರಿಗಣಿಸಿ ವಿಷಯವನ್ನು ಕಾನೂನಿಗೆ ಒಳಪಟ್ಟು ಇತ್ಯರ್ಥ ಮಾಡಲು ಆದೇಶಿಸಿರುತ್ತದೆ.

16. ಘನ ಉಚ್ಚ ನ್ಯಾಯಾಲಯದ ಆದೇಶಗಳ ಹಿನ್ನೆಲೆಯಲ್ಲಿ ಮೇಲಿನ ರಿಟ್ ಅರ್ಜಿಯಲ್ಲಿನ ಮೊದಲನೆಯ ಪ್ರತಿವಾದಿಯಾದ ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ.

17. ಈಗಿನ ಆಡಳಿತ ಮಂಡಳಿಗೆ ಎಲ್ಲಾ ಚುನಾಯಿತ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿದ್ದರೂ, ಆಯ್ಕೆಯಾಗಿರುವ ಒಟ್ಟು 15 ಆಡಳಿತ ಮಂಡಳಿ ಸದಸ್ಯರ ಪೈಕಿ 07 ಜನ ನಿರ್ದೇಶಕರು ಹಿಂದಿನ ಆಡಳಿತ ಮಂಡಳಿಯಲ್ಲಿದ್ದು, ಮತ್ತೆ ಈಗ ಪುನರಾಯ್ಕೆಯಾಗಿದ್ದು ಉಳಿದ 08 ಜನ ಸದಸ್ಯರು ಹೊಸದಾಗಿ ಚುನಾಯಿತರಾಗಿರುತ್ತಾರೆ. ಕಾರ್ಖಾನೆಯ ಅಂದಿನ ಅಧ್ಯಕ್ಷರಾದ ಶ್ರೀ ಹೆಚ್.ಎಸ್. ಶಿವಶಂಕರ್ ಅವರು ತಮ್ಮ ದಿನಾಂಕ: 12.05.2009ರ ಸಮಜಾಯಿಷಿಯನ್ನು ಹಾಗೂ ಆಡಳಿತ ಮಂಡಳಿಯ ಸದಸ್ಯರಾದ ಶ್ರೀಮತಿ ಲೀಲಾ ಓಂಕಾರಪ್ಪನವರು ನೀಡಿರುವ ಸಮಜಾಯಿಷಿಯಲ್ಲಿ ಕಬ್ಬು ಆಯುಕ್ತರು ನೀಡಿರುವ ನೋಟೀಸಿನಲ್ಲಿ ಉಲ್ಲೇಖಿಸಿರುವ ಆರೋಪಗಳೆಲ್ಲವೂ ಹಿಂದಿನ ಆಡಳಿತ ಮಂಡಳಿಯ ಅವಧಿಗೆ ಸಂಬಂಧಿಸಿದ್ದಾಗಿದ್ದು, ಆ ಘಟನೆಗಳಿಗೆ ಅಥವಾ ಆ ಸಮಯದಲ್ಲಿ ನಡೆದಿರಬಹುದಾದ ಅವ್ಯವಹಾರಗಳಿಗೆ ಈಗಿನ ಆಡಳಿತ ಮಂಡಳಿ ಸದಸ್ಯರನ್ನು ಜವಾಬ್ದಾರರನ್ನಾಗಿಸುವುದು ಕಾನೂನು ಬಾಹಿರ ಎಂದು ತಿಳಿಸಿರುತ್ತಾರೆ. ಆದರೆ, ಈ ಅಂಶಗಳನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಇವರು ಪರಿಗಣಿಸಿರುವುದಿಲ್ಲ. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಅವರ ದಿನಾಂಕ:08.01.2010ರ ಆದೇಶದಲ್ಲಿ ಕಾರ್ಖಾನೆಯ ಕಬ್ಬು ಅರಿಯುವ ಕೆಲಸ ಸ್ಥಗಿತಗೊಂಡಿದ್ದು ಕಾರ್ಖಾನೆಯನ್ನು ಪುನರಾರಂಭಿಸಲು ಆಡಳಿತ ಮಂಡಳಿಯ ಕಾರ್ಯವೈಫಲ್ಯವೇ ಕಾರಣವೆಂದು ತಿಳಿಸಿರುತ್ತಾರೆ ಮತ್ತು ಈ ಆದೇಶದಲ್ಲಿ ಹೊಸದಾಗಿ ಆಯ್ಕೆಯಾದ ಆಡಳಿತ ಮಂಡಳಿ ಸದಸ್ಯರು ಹಿಂದಿನ ವೈಫಲ್ಯಗಳಿಗೆ ಹೇಗೆ ಕಾರಣರಾಗುತ್ತಾರೆ ಎಂಬುದನ್ನು ವಿವರಿಸಿರುವುದಿಲ್ಲ. ಅವರ ಆದೇಶದಲ್ಲಿ ಕಾರ್ಖಾನೆಯನ್ನು ಪುನರಾರಂಭಿಸಲು ಹಾಗೂ ಕಾರ್ಖಾನೆಯ ಆಡಳಿತದಲ್ಲಿ ಕಂಡು ಬಂದ ನ್ಯೂನ್ಯತೆಗಳನ್ನು ಸರಿಪಡಿಸಲು ಆಡಳಿತ ಮಂಡಳಿಯನ್ನು ರದ್ದುಪಡಿಸಿರುವುದಾಗಿ ತಿಳಿಸಿರುತ್ತಾರೆ. ಈ ಹಿಂದಿನ ಆಡಳಿತ ಮಂಡಳಿಯವರು ಮಾಡಿದರೆನ್ನಲಾದ ಆರೋಪಗಳಿಗೆ ಹೊಸದಾಗಿ ಆಯ್ಕೆಯಾದ ಸದಸ್ಯರು ಜವಾಬ್ದಾರರಾಗುವರೆಂದು ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರ ವಾದವು ಒಪ್ಪಲು ಅರ್ಹವಿರುವುದಿಲ್ಲ. ಆದರೆ, ಹಿಂದಿನ ಆಡಳಿತ ಮಂಡಳಿಯ ಸದಸ್ಯರು ಮತ್ತೆ ಪುನರಾಯ್ಕೆಯಾಗಿದ್ದಲ್ಲಿ ಅವರು ಮಾಡಿದರೆನ್ನಲಾದ ಹಿಂದಿನ ತಪ್ಪುಗಳಿಗೆ ಅವರನ್ನು ಜವಾಬ್ದಾರರನ್ನಾಗಿ ಮಾಡಿ ಅಂತಹ ಪ್ರತಿ ಆಡಳಿತ ಮಂಡಳಿ ಸದಸ್ಯರ ವಿರುದ್ಧ ಕಾನೂನು ರೀತಿಯ ಕ್ರಮ ಜರುಗಿಸಲು ಅವಕಾಶವಿರುತ್ತದೆ. ಆದರೆ, ಹಿಂದಿನ ಆಡಳಿತ ಮಂಡಳಿಯ ಕೆಲವು ನಿರ್ದೇಶಕರು ಮಾಡಿದರೆನ್ನಲಾದ ಆರೋಪಗಳಿಗೆ ಹೊಸದಾಗಿ ಆಯ್ಕೆಯಾದ ಆಡಳಿತ ಮಂಡಳಿಯನ್ನು ರದ್ದುಪಡಿಸುವುದು ನ್ಯಾಯಸಮ್ಮತವಾಗಿರುವುದಿಲ್ಲ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರ ಅವಕಾಶಗಳು ಮತ್ತು ಗೌರವ ಉಚ್ಚ ನ್ಯಾಯಾಲಯವು ಮೇಲ್ಕಂಡ ಪ್ರಕರಣಗಳಲ್ಲಿ ನೀಡಿರುವ ಆದೇಶಗಳನ್ನು ಗಮನಿಸಿದಾಗ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಇದರ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ: 08.01.2010ರಲ್ಲಿ ಹೊರಡಿಸಿರುವ ಆದೇಶವು ಸಮಂಜಸವಾಗಿರುವುದಿಲ್ಲ. ಅಲ್ಲದೆ ಗೌರವ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:35314/2011 ರಲ್ಲಿ ದಿನಾಂಕ: 21.02.2012 ಮತ್ತು 28.08.2012 ರಲ್ಲಿ ನೀಡಿರುವ ಆದೇಶದಲ್ಲಿ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಂತೆ ಹೊರಡಿಸಿದ್ದ ಆದೇಶ ಸಂಖ್ಯೆ: ಸಿಓ 02 ಸಸಕಾ 2011 ದಿನಾಂಕ: 27.06.2011 ಅನ್ನು ಈಗಾಗಲೇ ರದ್ದುಗೊಳಿಸಿದೆ.

ಆದುದರಿಂದ, ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 75 ನ್ಯಾದಾಅ 2011, ಬೆಂಗಳೂರು, ದಿನಾಂಕ: 09.04.2013**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಗೌರವ ಉಚ್ಚ ನ್ಯಾಯಾಲಯವು ದಿನಾಂಕ: 27.06.2011ರ ಸರ್ಕಾರದ ಆದೇಶವನ್ನು ರದ್ದುಗೊಳಿಸಿರುವ ಹಿನ್ನೆಲೆಯಲ್ಲಿ ದಿನಾಂಕ:30.05.2009 ರಂದು ಆಯ್ಕೆಯಾಗಿರುವ ಭದ್ರಾ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ ಇದರ ಆಡಳಿತ ಮಂಡಳಿಯನ್ನು ಪುನರ್ ಸ್ಥಾಪಿಸಲು ಹಾಗೂ ಕಾರ್ಖಾನೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ವಿವಿಧ ಪ್ರಕರಣಗಳ ಅವಕಾಶದಂತೆ ನಿಯಮಾನುಸಾರ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಹಕಾರ ಇಲಾಖೆ.

PR.510
S/C.25

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಹೆನ್ನಾಗರ ಕೆರೆ ಅಭಿವೃದ್ಧಿ ಕಾಮಗಾರಿಯ ಹೆಚ್ಚುವರಿ ಆರ್ಥಿಕ ಹೊರೆಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ/108/ಮಸಾವಿ/2010, ದಿನಾಂಕ 28.09.2011.

2) ದಿನಾಂಕ 31.01.2013ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ ತಾಂಸ-7/ಸಇ18/ ವರ್ಕ್‌ಸ್ಲಿಪ್/ 2012-13/479.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಹೆನ್ನಾಗರ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದ್ದು, ರೂ.115.00 ಲಕ್ಷ ಮೂಲ ಅಂದಾಜು ಪಟ್ಟಿಗೆ 4702-00-101-1-12-059 13ನೇ ಹಣಕಾಸು ಆಯೋಗದಡಿಯಲ್ಲಿ ಮುಖ್ಯ ಇಂಜಿನಿಯರ್‌ರವರು ಆಡಳಿತಾತ್ಮಕ ಅನುಮೋದನೆ ಮತ್ತು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಟೆಂಡರಿನ ಆಧಾರದ ಮೇಲೆ ಮೆ: ಅಮೃತ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ಪರೀಷ್ಕೃತ ಮೊತ್ತದ ಮೇಲೆ ಶೇಕಡ 5.20 ಕಡಿಮೆ ಮೊತ್ತಕ್ಕೆ ಅಂದರೆ ರೂ. 111,13,191/-ಗಳಿಗೆ ವಹಿಸಲು ಅನುಮೋದನೆ ನೀಡಲಾಗಿದೆ. ಕಾಮಗಾರಿಯು ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರು ಕಾಮಗಾರಿಯನ್ನು ಪರಿವೀಕ್ಷಿಸಿ ವಾಸ್ತವಿಕ ಅವಶ್ಯಕತೆಗೆ ಅನುಸಾರ ಕೆಲವು ಮಾರ್ಪಾಡುಗಳನ್ನು ಮಾಡಲು ಸೂಚಿಸಿದ್ದು ಅದರಂತೆ ಕಾಮಗಾರಿಯನ್ನು ನಿರ್ವಹಿಸಲು ಹೆಚ್ಚುವರಿ ಆರ್ಥಿಕ ಹೊರೆ ತ:ಖ್ತೆಯನ್ನು ತಯಾರಿಸಿ ಈ ಪ್ರಸ್ತಾವನೆಗೆ ಮೇಲೆ ಓದಲಾದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಮಂಜೂರಾದ ಅಂದಾಜು ಮೊತ್ತದ ಮೇಲೆ ವಾಸ್ತವವಾಗಿ ನಿರ್ವಹಿಸಬೇಕಾದ/ನಿರ್ವಹಿಸಿರುವ ಕಾಮಗಾರಿಯ ಮೊತ್ತವು ಒಟ್ಟು ರೂ.141,02,173/-ಆಗಿದ್ದು, ಕಾಮಗಾರಿಯ ಹೆಚ್ಚುವರಿ ಮೊತ್ತವು ಒಟ್ಟು ರೂ. 26,02,173/- ಆಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 22 ಕೆಜಿದು (ತಾಂತ್ರಿಕ) 2013, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಹೆನ್ನಾಗರ ಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಮೊತ್ತ ರೂ. 115,00,000.00 ಲಕ್ಷದ ಮೇಲೆ ಉಂಟಾಗಿರುವ ಹೆಚ್ಚುವರಿ ಆರ್ಥಿಕ ಹೊರೆ ರೂ. 26,02,173/- (ಇಪ್ಪತ್ತ ಆರು ಲಕ್ಷ ಎರೆಡು ಸಾವಿರದ ಒಂದು ನೂರ ಎಪ್ಪತ್ತ ಮೂರು ರೂ.ಗಳು ಮಾತ್ರ) ಗಳಿಗೆ ಈ ಬಾಬ್ತನ್ನು ಪರೀಷ್ಕೃತ ಅಂದಾಜಿನಲ್ಲಿ ಸೇರಿಸಿಕೊಳ್ಳುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2011, ದಿನಾಂಕ: 28/09/2011ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

PR.345

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅಡವಿ ಸೋಮಾಪುರ ಕೆರೆಯಿಂದ ಹೊನ್ನಾಪುರ(ತಡಸ–ಬೈಲಂಗೇರಿ) ಕೆರೆಯ (ಚೈ0.00 ಕಿ.ಮೀ. ದಿಂದ 4.00 ಕಿ.ಮೀ. ವರೆಗೆ ಫೀಡರ್‌ಕಾಲುವೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 03 ನಯೋಕಾ 20111, ದಿನಾಂಕ:13.02.2012

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–3/2012–13/715/ದಿನಾಂಕ:05.02.2013.

**ಪ್ರಸ್ತಾವನೆ:**

ನಬಾರ್ಡ್‌ನ ಆರ್.ಐ.ಡಿ.ಎಫ್.–17ರಡಿ ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅಡವಿ ಸೋಮಾಪುರ ಕೆರೆಯಿಂದ ಹೊನ್ನಾಪುರ(ತಡಸ–ಬೈಲಂಗೇರಿ) ಕೆರೆಯ (ಚೈ0.00 ಕಿ.ಮೀ. ದಿಂದ 4.00 ಕಿ.ಮೀ. ವರೆಗೆ ಫೀಡರ್‌ಕಾಲುವೆ ಸುಧಾರಣೆ ಕಾಮಗಾರಿಯ ರೂ.175.00ಲಕ್ಷಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 30.10.2012 |
| ಜಿಲ್ಲಾ ಟೆಂಡರ್ ಬುಲೆಟಿನ್ | ಅಕ್ಟೋಬರ್ 2012 – 3ನೇ ವಾರದ ಜಿಲ್ಲಾ ಟೆಂಡರ್ ಬುಲೆಟಿನ್ |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 02.11.2012 |

ದಿನಾಂಕ:16.11.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ:15.12.2012ರಂದು ತರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,72,83,899 /– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,64,62,917 /– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿವೆ |
| ಎನ್. ದಿನೇಶ, ಒಂದನೇ ದರ್ಜೆ ಗುತ್ತಿಗೆದಾರರು | 1,99,30,316/– | 15.31 ಹೆಚ್ಚು | 21.06 ಹೆಚ್ಚು |
| ಆರ್.ವಿ.ಶೆಟ್ಟಿ , ಒಂದನೇ ದರ್ಜೆ ಗುತ್ತಿಗೆದಾರರು | 2,07,73,078/– | 20.19 ಹೆಚ್ಚು | 26.18 ಹೆಚ್ಚು |

ಮೇಲ್ಕಂಡಂತೆ ಶ್ರೀ ಎನ್. ದಿನೇಶ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕನಿಷ್ಟ ದರಗಳನ್ನು ನಮೂದಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.21.06 ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಪಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.1,64,62,917 /–ಗಳ ಮೇಲೆ ಶೇಕಡಾ14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,87,67,725/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 21 ಕೆಜಿದು (ತಾಂತ್ರಿಕ) 2013 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅಡವಿ ಸೋಮಾಪುರ ಕೆರೆಯಿಂದ ಹೊನ್ನಾಪುರ(ತಡಸ–ಬೈಲಂಗೇರಿ) ಕೆರೆಯ (ಚೈ0.00 ಕಿ.ಮೀ. ದಿಂದ 4.00 ಕಿ.ಮೀ. ವರೆಗೆ ಫೀಡರ್‌ಕಾಲುವೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.1,64,62,917 /–ಗಳ ಮೇಲೆ ಶೇಕಡಾ14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,87,67,725/–ಗಳಿಗೆ (ರೂ. ಒಂದು ಕೋಟಿ ಎಂಬತ್ತೇಳು ಲಕ್ಷ ಅರವತ್ತೇಳು ಸಾವಿರದ ಏಳು ನೂರ ಇಪ್ಪತ್ತೈದು ಮಾತ್ರ)ಗಳಿಗೆ ಶ್ರೀ ಎನ್. ದಿನೇಶ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.391**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಬೇಡರಹಟ್ಟಿ ಗ್ರಾಮದ ಬೇಡರ ಜನಾಂಗದವರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2012–13/420/ದಿನಾಂಕ:23.01.2013

**ಪ್ರಸ್ತಾವನೆ:**

2012–13ನೇ ಸಾಲಿನ ವಿಶೇಷ ಘಟಕ ಯೋಜನೆ ಕಾರ್ಯಕ್ರಮದಡಿ ಅನುಮೋದನೆಗೊಂಡಿರುವ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಬೇಡರಹಟ್ಟಿ ಗ್ರಾಮದ ಬೇಡರ ಜನಾಂಗದವರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯ ರೂ.20.00ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾಟೆಂಡರ್ ಬುಲೆಟಿನ್ | 17.12.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 22.12.2012 |
| ಲೋಕ ದರ್ಶನ ಬೆಳಗಾವಿ ದಿನಪತ್ರಿಕೆ | 25.12.2012 |

ದಿನಾಂಕ: 29.12.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.11,42,770 /– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು | 13,42,750/– | 17.50 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.17.50ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.11,42,770/–ಗಳ ಮೇಲೆ ಶೇಕಡಾ.13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.12,97,044/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಏನೀಯೋ (ತಾಂತ್ರಿಕ) 2013 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಬೇಡರಹಟ್ಟಿ ಗ್ರಾಮದ ಬೇಡರ ಜನಾಂಗದವರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.11,42,770/–ಗಳ ಮೇಲೆ ಶೇಕಡಾ.13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.12,97,044/–ಗಳಿಗೆ (ರೂ. ಹನ್ನೆರಡು ಲಕ್ಷ ತೊಂಬತ್ತೇಳು ಸಾವಿರದ ನಲವತ್ತನಾಲ್ಕು ಮಾತ್ರ)ಗಳಿಗೆ ಶ್ರೀ ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.392**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಗ್ರಾಮದ ಪರಿಶಿಷ್ಟ ಜಾತಿ ಜನರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2012–13/419/ದಿನಾಂಕ:23.01.2013.

**ಪ್ರಸ್ತಾವನೆ:**

2012–13ನೇ ಸಾಲಿನ ವಿಶೇಷ ಘಟಕ ಯೋಜನೆ ಕಾರ್ಯಕ್ರಮದಡಿ ಅನುಮೋದನೆಗೊಂಡಿರುವ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಗ್ರಾಮದ ಪರಿಶಿಷ್ಟ ಜಾತಿ ಜನರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯ ರೂ.35.00ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾಟೆಂಡರ್ ಬುಲೆಟಿನ್ | 13.11.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 19.11.2012 |
| ಕನ್ನಡ ಪ್ರಭ ದಿನಪತ್ರಿಕೆ | 19.11.2012 |

ದಿನಾಂಕ: 03.12.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | | |
|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 32,03,119 /– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು | 36,70,763/– | 14.60 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.14.60ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 32,03,119/–ಗಳ ಮೇಲೆ ಶೇಕಡಾ.13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 36,35,540/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 34 ಏನೀಯೋ (ತಾಂತ್ರಿಕ) 2013 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ತಂಗಡಿ ಗ್ರಾಮದ ಪರಿಶಿಷ್ಟ ಜಾತಿ ಜನರ ಜಮೀನುಗಳಿಗೆ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.32,03,119/–ಗಳ ಮೇಲೆ ಶೇಕಡಾ.13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 36,35,540/–ಗಳಿಗೆ (ರೂ. ಮೂವತ್ತಾರು ಲಕ್ಷ ಮೂವತ್ತೈದು ಸಾವಿರದ ಐನೂರ ನಲವತ್ತು ಮಾತ್ರ)ಗಳಿಗೆ ಶ್ರೀ ಎಂ.ಎಂ.ಮುಂಡೇವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.337**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಕಂಚಕರವಾಡಿ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದ ಜಮೀನುಗಳಿಗೆ ಕೃಷ್ಣಾ ನದಿಯಿಂದ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2012–13/488/ದಿನಾಂಕ: 28.01.2013.

**ಪ್ರಸ್ತಾವನೆ:**

2012–13ನೇ ಸಾಲಿನ ವಿಶೇಷ ಘಟಕ ಯೋಜನೆ ಕಾರ್ಯಕ್ರಮದಡಿ ಅನುಮೋದನೆಗೊಂಡಿರುವ ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಕಂಚಕರವಾಡಿ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದ ಜಮೀನುಗಳಿಗೆ ಕೃಷ್ಣಾ ನದಿಯಿಂದ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ರೂ.50.00ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾಟೆಂಡರ್ ಬುಲೆಟಿನ್ | 24.12.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 03.01.2013 |
| ಕನ್ನಡ ಪ್ರಭ ದಿನಪತ್ರಿಕೆ | 04.01.2013 |

ದಿನಾಂಕ:11.01.2013ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 46,86,249 /– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಸಂತೋಷ ಕೆ. ಗಾಣಿಗೇರ, ಒಂದನೇ ದರ್ಜೆ ಗುತ್ತಿಗೆದಾರರು | 55,76,609/– | 19.00 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಂತೋಷ ಕೆ. ಗಾಣಿಗೇರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.19.00 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.46,86,249 /–ಗಳ ಮೇಲೆ ಶೇಕಡಾ.14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 53,42,324/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 32 ಏನೀಯೋ (ತಾಂತ್ರಿಕ) 2013 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಕಂಚಕರವಾಡಿ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದ ಜಮೀನುಗಳಿಗೆ ಕೃಷ್ಣಾ ನದಿಯಿಂದ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.46,86,249/–ಗಳ ಮೇಲೆ ಶೇಕಡಾ.14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 53,42,324/–

ಗಳಿಗೆ (ರೂ. ಐವತ್ತಮೂರು ಲಕ್ಷ ನಲವತ್ತೆರಡು ಸಾವಿರದ ಮುನ್ನೂರ ಇಪ್ಪತ್ತನಾಲ್ಕು ಮಾತ್ರ)ಗಳಿಗೆ ಶ್ರೀ ಶ್ರೀ ಸಂತೋಷ ಕೆ. ಗಾಣಿಗೇರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.338**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬಾಗಲಕೋಟ ಜಿಲ್ಲೆ ಹಾಗೂ ತಾಲ್ಲೂಕಿನ ಮುಗಳೊಳ್ಳಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಗೆ ಎಕ್ಸ್‌ಪ್ರೆಸ್ ಫೀಡರ್‌ಲೈನ್ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-6/2012-13/567/ದಿನಾಂಕ: 31.01.2013.

**ಪ್ರಸ್ತಾವನೆ:**

ಬಾಗಲಕೋಟ ಜಿಲ್ಲೆ ಹಾಗೂ ತಾಲ್ಲೂಕಿನ ಮುಗಳೊಳ್ಳಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ಕಾಮಗಾರಿಯು ನಬಾರ್ಡ್‌ನ ಆರ್.ಐ.ಡಿ.ಎಫ್.-16ರಡಿ ರೂ.1854.00ಲಕ್ಷ ಅಂದಾಜು ಮೊತ್ತ ಹಾಗೂ ರೂ.1761.30ಲಕ್ಷಗಳ ಸಾಲ ಸೌಲಭ್ಯದೊಂದಿಗೆ ಅನುಮೋದನೆಯಾಗಿರುತ್ತದೆ. ಈ ಕಾಮಗಾರಿಯ ಅಂದಾಜಿಗೆ ಇತರ ಕಾಮಗಾರಿಗಳೊಂದಿಗೆ ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2010, ದಿನಾಂಕ: 20.10.2010ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯು ಪ್ರಗತಿಯಲ್ಲಿದ್ದು ಸದರಿ ಯೋಜನೆಗೆ ವಿದ್ಯುತ್ ಸಂಪರ್ಕ ಒದಗಿಸುವ ರೂ.7.30ಲಕ್ಷ ಮೊತ್ತದ ಉಪ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಅನುಮೋದನೆ ನೀಡಿರುತ್ತಾರೆ.

ಮೇಲ್ಕಂಡ ಎಕ್ಸ್‌ಪ್ರೆಸ್ ಫೀಡರ್‌ಲೈನ್ ಒದಗಿಸುವ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 07.12.2012 |
| ಪ್ರಜಾವಾಣಿ ದಿನಪತ್ರಿಕೆ | 07.12.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 07.12.2012 |

ದಿನಾಂಕ:19.12.2012ರಂದು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುವುದಾಗಿ ವರದಿಯಾಗಿರುತ್ತದೆ. ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.5,18,298 /- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.6,09,195/- |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮೆ: ಮೆಹತ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು | 7,80,477/- | 50.58 ಹೆಚ್ಚು | 28.12 ಹೆಚ್ಚು |
| ಮೆ: ಜೈನ್ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು | 7,85,484/- | 51.55 ಹೆಚ್ಚು | 28.94 ಹೆಚ್ಚು |

ಮೇಲ್ಕಂಡಂತೆ ಮೆ: ಮೆಹತ ಎಲೆಕ್ಟ್ರಿಕಲ್ಸ್, ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.28.12ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

